# ಮಹಾರಾಷ್ಟ್ರದ ಕನ್ನಡ ಶಾಸನೋಕ್ತ ಸ್ಥಳನಾಮಗಳು

(ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಸಂಪ್ರಬಂಧ)



ಸಂಶೋಧಕರು
ಮಣಿಕಂಠ ಬಿ
ನೋಂದಣಿ ಸಂಖ್ಯೆ- [illegible]

ಮಾರ್ಗದರ್ಶಕರು
ಡಾ. ಕಲವೀರ ಮನ್ವಾಚಾರ
ಪ್ರಾಧ್ಯಾಪಕರು ಹಾಗೂ ಮುಖ್ಯಸ್ಥರು



ಶಾಸನಶಾಸ್ತ್ರ ವಿಭಾಗ
ಸಮಾಜವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬



೨೦೧೬

# ಮಹಾರಾಷ್ಟ್ರದ ಕನ್ನಡ ಶಾಸನೋಕ್ತ ಸ್ಥಳನಾಮಗಳು

(ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಸಂಪ್ರಬಂಧ)



ಸಂಶೋಧಕರು

**ಮಣಿಕಂಠ ಬಿ**

ನೋಂದಣಿ ಸಂಖ್ಯೆ- ೧೫೦೧೯೦೩೦೦೨೧

ಮಾರ್ಗದರ್ಶಕರು

**ಡಾ. ಕಲವೀರ ಮನ್ವಾಚಾರ**

ಪ್ರಾಧ್ಯಾಪಕರು ಹಾಗೂ ಮುಖ್ಯಸ್ಥರು



**ಶಾಸನಶಾಸ್ತ್ರ ವಿಭಾಗ**

ಸಮಾಜ-ವಿಜ್ಞಾನಗಳ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

೨೦೧೬

## ಮಾರ್ಗದರ್ಶಕರ ದೃಢೀಕರಣ

**ಮಹಾರಾಷ್ಟ್ರದ ಕನ್ನಡ ಶಾಸನೋಕ್ತ ಸ್ಥಳನಾಮಗಳು** ಎಂಬ ಸಂಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಎಂ.ಫಿಲ್. ಪದವಿಗಾಗಿ **ಮಣಿಕಂಠ ಬಿ** ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಪ್ರಸ್ತುತ ಸಂಪ್ರಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಇಲ್ಲವೆ ಪ್ರಕಟಣೆಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಸ್ಥಳ : ವಿದ್ಯಾರಣ್ಯ

ದಿನಾಂಕ : ೩೦೦೭೧೬

**ಡಾ. ಕಲವೀರ ಮನ್ವಾಚಾರ**

ಮಾರ್ಗದರ್ಶಕರು

ಶಾಸನಶಾಸ್ತ್ರ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

## ಘೋಷಣಾ ಪತ್ರ

**ಮಹಾರಾಷ್ಟ್ರದ ಕನ್ನಡ ಶಾಸನೋಕ್ತ ಸ್ಥಳನಾಮಗಳು** ಎಂಬ ಸಂಪ್ರಬಂಧವನ್ನು **ಡಾ. ಕಲವೀರ ಮನ್ವಾಚಾರ** ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸುತ್ತಿದ್ದೇನೆ. ಈ ಸಂಪ್ರಬಂಧವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲ. ಇದರ ಯಾವುದೇ ಭಾಗ ಎಲ್ಲಿಯೂ ಪ್ರಕಟಗೊಳಿಸಿಲ್ಲವೆಂದು ಈ ಮೂಲಕ ದೃಢೀಕರಿಸುತ್ತೇನೆ.

Manikantab.
**ಮಣಿಕಂಠ ಬಿ**
ಸಂಶೋಧಕರು
ಶಾಸನಶಾಸ್ತ್ರ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ಸ್ಥಳ : ವಿದ್ಯಾರಣ್ಯ
ದಿನಾಂಕ : 23/07/2016.

# ಪರಿವಿಡಿ

# ಅಧ್ಯಾಯ–೦೧

## ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ಸ್ವರೂಪ

೧.೧ ಅಧ್ಯಯನದ ಉದ್ದೇಶ

೧.೨ ಅಧ್ಯಯನದ ವ್ಯಾಪ್ತಿ

೧.೩ ಅಧ್ಯಯನದ ಸ್ವರೂಪ

೧.೪ ಅಧ್ಯಯನದ ವಿಧಾನ

ಅಧ್ಯಾಯ–೧

# ಮಹಾರಾಷ್ಟ್ರದ ಕನ್ನಡ ಶಾಸನೋಕ್ತ ಸ್ಥಳನಾಮಗಳು

## ಪ್ರಸ್ತಾವನೆ

ವ್ಯಕ್ತಿಗೊಂದು ಹೆಸರು ಅನಿವಾರ್ಯ ಹೇಗೋ ಹಾಗೆಯೇ ಆತ ನೆಲೆಸಿದ ಸ್ಥಳಕ್ಕೂ ಹೆಸರು ಅನಿವಾರ್ಯ. ತಾನು ನೆಲೆಸಿದ ನೆಲೆಗೊಂದು ಹೆಸರಿಡುವ ಪ್ರಕ್ರಿಯೆ ಇಂದು ನೆನ್ನೆಯದಲ್ಲ ಮಾನವನಷ್ಟೇ ಪ್ರಾಚೀನವಾದುದು ತನಗೊಂದು ಹೆಸರುಬೇಕು, ತಾನು ನಿಂತ ನೆಲೆಗೊಂದು ಹೆಸರಿಡಬೇಕು ಎಂಬ ಕಲ್ಪನೆಯೇ ಆದಿಮಾನವನ ಬುದ್ದಿಮತ್ತೆಯ ಪ್ರಾರಂಭಿಕ ಹಂತ.

ಜನವಸತಿಯ ನೆಲೆಯೊಂದಕ್ಕೆ ಹೆಸರಿಡುವ ಪುರಾತನ ಪ್ರಕ್ರಿಯೆಯಲ್ಲಿ ಒಂದು ಬಲವಾದ ಹಿನ್ನೆಲೆ ಇರುತ್ತಿತ್ತು ಇಟ್ಟ ಹೆಸರಿಗೊಂದು ಕಾರ್ಯಕಾರಣ ಸಂಬಂಧವಿರುತ್ತಿತ್ತು, ಅರ್ಥವಿರುತ್ತಿತ್ತು. ಹಿನ್ನೆಲೆಯಿರದ, ಕಾರಣವಿರದ, ಅರ್ಥವಿರದ ಪ್ರಾಚೀನ ಸ್ಥಳನಾಮಗಳನ್ನು ನಾವು ಊಹಿಸಲು ಸಾಧ್ಯವಿಲ್ಲ. ಆರಂಭಿಕ ಸ್ಥಳನಾಮಗಳು ನಿಸರ್ಗವಾಚಿಗಳಾಗಿರುತ್ತಿದ್ದವು. ಎರಡನೇ ಹಂತದ ನಾಮಕರಣ ಪ್ರಕ್ರಿಯೆಯಲ್ಲಿ ಜನಾಂಗವಾಚಿಗಳು ಕಂಡು ಬರುತ್ತಿತ್ತು. ಮೂರನೆಯ ಹಂತದ ನಾಮಕರಣ ಪ್ರಕ್ರಿಯೆಯಲ್ಲಿ ಸ್ಥಳನಾಮಗಳು ವ್ಯಕ್ತಿವಾಚಿಗಳಾಗಿ ಪರಿಣಮಿಸಿದವು.

ಪ್ರಸ್ತುತ ಈ ಅಧ್ಯಯನವು ಸ್ಥಳನಾಮಗಳನ್ನು ಕುರಿತು ಚರ್ಚಿಸಿದರೂ ವಿಶೇಷವಾಗಿ ಮಹಾರಾಷ್ಟ್ರದ ಕನ್ನಡ ಶಾಸನೋಕ್ತ ಸ್ಥಳನಾಮಗಳ ಮೇಲೆ ಬೆಳಕು ಚೆಲ್ಲುತ್ತದೆ. ಇಂದಿನ ಕರ್ನಾಟಕದ ಉತ್ತರ–ಪಶ್ಚಿಮದ ಗಡಿಯಲ್ಲಿ ಮಹಾರಾಷ್ಟ್ರ ರಾಜ್ಯ ಮತ್ತು ಮರಾಠಿ ಭಾಷೆಗಳು ವ್ಯಾಪಿಸಿವೆ. ಒಂದು ಸಾವಿರ ವರ್ಷಕ್ಕೂ ಹಿಂದೆ ಕರ್ಹಾಡ–ಸತಾರೆ ವರೆಗಿನ ಪ್ರದೇಶ ಮತ್ತು ವಿದರ್ಭಕ್ಕೆ ತಾಗಿಕೊಂಡಿರುವ ಗೋದಾವರಿ ತೀರದ ಪ್ರದೇಶದಲ್ಲಿ ಕನ್ನಡ ಭಾಷೆಯು ಬಳಕೆಯಲ್ಲಿತ್ತು. ಅಂದರೆ ಇಲ್ಲಿ ಮರಾಠಿ ಭಾಷೆಯು ಕನ್ನಡದ ಗರ್ಭದಲ್ಲಿಯೇ ಉದಿಸಿತೆಂಬ ಸಂಗತಿ ಮನಗಾಣಬೇಕಾಗುತ್ತದೆ.

ಜನಾಂಗಿಕವಾಗಿ ಮಹಾರಾಷ್ಟ್ರದ ಬಹುಸಂಖ್ಯಾತರು ದ್ರಾವಿಡ ಮೂಲದವರಾಗಿರುವುದು ಎದ್ದು ಕಾಣುವ ಅಂಶ. ಮೊದಲ ಹಂತದಲ್ಲಿ ಮುಂಡ ಜನಾಂಗ, ಅನಂತರ ದ್ರಾವಿಡ-ವಿಶೇಷವಾಗಿ ಕನ್ನಡ ಜನಾಂಗ, ತರುವಾಯದಲ್ಲಿ ಆರ್ಯ ಮೂಲದ ವಿವಿಧ ಜನವರ್ಗಗಳು ಬಂದು ಈ ಪ್ರದೇಶದಲ್ಲಿ ನೆಲೆಸಿ ತಮ್ಮ ಸಂಸ್ಕೃತಿ-ನಾಗರೀಕತೆಗಳನ್ನು ಸ್ಥಾಪಿಸಿಕೊಂಡವು. ತೀರ ಇತ್ತೀಚೆಗೆ ಮುಸಲ್ಮಾನ ಆಡಳಿತಗಾರರು ಇಡೀ ಮಹಾರಾಷ್ಟ್ರವನ್ನು ತಮ್ಮ ಸ್ವಾಧೀನಕ್ಕೆ ಒಳಪಡಿಸಿಕೊಂಡಿದ್ದರಿಂದ ಅಲ್ಲಿನ ಸ್ಥಳವಾಚಕಗಳ ಮೇಲೆ ಅವರ ಪ್ರಭಾವವೂ ಯಥೇಚ್ಛವಾಗಿ ಮೂಡಿದೆ.

ಮುಸಲ್ಮಾನರ ತರುವಾಯ ಮರಾಠಿ ಮಾತೃಭಾಷೆಯ ಜನರು ತಮ್ಮ ರಾಜ್ಯ ಸ್ಥಾಪಿಸುವಲ್ಲಿ ಯಶಸ್ಸು ಸಾಧಿಸಿದರು. ೧೭ನೇ ಶತಮಾನದ ಉತ್ತರಾರ್ಧದಲ್ಲಿ ಪ್ರಾರಂಭವಾದ ಈ ಪ್ರಕ್ರಿಯೆ ೧೮ನೇಯ ಶತಮಾನದಲ್ಲಿ ತನ್ನ ಪರಮಾವಧಿಯನ್ನು ಮುಟ್ಟಿ ಸತಾರೆಯ ದಕ್ಷಿಣ ಮರಾಠವಾಡಂ ಮತ್ತು ತೆಲಂಗಾಣದ ಬಹುಭಾಗವನ್ನು ಮರಾಠಿಮಯವಾಗಿಸಿತು. ಎರಡೂವರೆ ಶತಮಾನಗಳ ಅವಧಿಯಲ್ಲಿ ಈ ಪ್ರದೇಶಗಳಲ್ಲಿ ಕನ್ನಡ ಭಾಷೆಯು ಪ್ರಬಲವಾಗಿತ್ತು. ಇದರಿಂದಾಗಿ ಮಹಾರಾಷ್ಟ್ರದ ಸ್ಥಳನಾಮಗಳ ಬಹು ಭಾಗ ಕನ್ನಡ ಮೂಲದ್ದೇ ಆಗಿವೆ, ಹೀಗಾಗಿ ಮಹಾರಾಷ್ಟ್ರದ ಕನ್ನಡ ಶಾಸನೋಕ್ತ ಸ್ಥಳನಾಮಗಳ ಮೇಲೆ ಈ ಅಧ್ಯಯನವು ಬೆಳಕು ಚೆಲ್ಲುತ್ತದೆ.

### ೧.೧ ಅಧ್ಯಯನದ ಉದ್ದೇಶ

ಪ್ರತಿಯೊಂದು ಅಧ್ಯಯನಕ್ಕೆ ತನ್ನದೇ ಆದ ಒಂದು ನಿರ್ದಿಷ್ಟ ಉದ್ದೇಶವಿರುತ್ತದೆ. ಉದ್ದೇಶವಿಲ್ಲದೆ ಯಾವ ಅಧ್ಯಯನವನ್ನು ಕೈಗೊಳ್ಳಲಾಗುವುದಿಲ್ಲ. ಹಾಗಾಗಿ ಪ್ರಸ್ತುತ ಅಧ್ಯಯನಕ್ಕೆ ಸಂಬಂಧಿಸಿದಂತೆ ಒಂದು ನಿರ್ದಿಷ್ಟವಾದ ಉದ್ದೇಶವಿದೆ. ಮಹಾರಾಷ್ಟ್ರದಲ್ಲಿ ೧೦ನೇ ಶತಮಾನದಿಂದ ೧೪ನೆ ಶತನಮಾನದವರೆಗೂ ಕನ್ನಡ ಶಾಸನಗಳು ಕಂಡು ಬಂದಿದ್ದು, ಇಲ್ಲಿನ ಶಾಸನೋಕ್ತ ಸ್ಥಳನಾಮಗಳನ್ನು ಕುರಿತು ಇದುವರೆಗೆ ಸಮಗ್ರವಾದ ಅಧ್ಯಯನವಿರುವುದಿಲ್ಲ. ಈ ಹಿನ್ನೆಲೆಯಲ್ಲಿ ಮಹಾರಾಷ್ಟ್ರದ ಕನ್ನಡ ಶಾಸನೋಕ್ತ ಸ್ಥಳನಾಮಗಳ ಕುರಿತು ಅಧ್ಯಯನಕ್ಕೆ ಒಳಪಡಿಸುವುದು ಪ್ರಸ್ತುತ ಅಧ್ಯಯನದ ಪ್ರಧಾನ ಉದ್ದೇಶವಾಗಿದೆ.

ಸ್ಥಳನಾಮಗಳ ಅಧ್ಯಯನವು ಮಬ್ಬುಕವಿದ ಹಲವಾರು ಕ್ಷೇತ್ರಗಳನ್ನು ಬೆಳಗಿಸಬಲ್ಲದು ಭೌಗೋಳಿಕವಾಗಿ, ಸಮಾಜಶಾಸ್ತ್ರೀಯವಾಗಿ ಹೀಗೆ ನಾಲ್ಕಾರು ಕ್ಷೇತ್ರಗಳಿಗೆ ಕೆಲವೊಮ್ಮೆ ಮೂಲ ಸಾಮಗ್ರಿಯನ್ನು ಇನ್ನೂ ಕೆಲವೊಮ್ಮೆ ಪೂರಕ ಸಾಮಗ್ರಿಯನ್ನು, ಒದಗಿಸಬಲ್ಲದೆಂಬುದರಿಂದ ಸ್ಥಳನಾಮಾಧ್ಯಯನವು ಅನಿವಾರ್ಯವೂ, ಕ್ಷಿಪ್ರವೂ ಆಗಿ ನಡೆಯಬೇಕಾಗಿದೆ. ಈ ಹಿನ್ನೆಲೆಯಲ್ಲಿ ಮಹಾರಾಷ್ಟ್ರದಲ್ಲಿ ದೊರೆತ ಕನ್ನಡ ಶಾಸನಗಳಲ್ಲಿನ ಸ್ಥಳನಾಮಗಳನ್ನು ಕುರಿತು ಅಧ್ಯಯನ ಮಾಡಲು ಪ್ರಯತ್ನಿಸಲಾಗಿದೆ.

### ೧.೨ ಅಧ್ಯಯನದ ವ್ಯಾಪ್ತಿ

ಯಾವುದೇ ವಿಷಯ ತೆಗೆದುಕೊಳ್ಳಬೇಕಾದರೆ ಅದರ ವ್ಯಾಪ್ತಿ ಪ್ರಮುಖವಾಗಿ ತಿಳಿದಿರಬೇಕು. ಆ ವಿಷಯಕ್ಕೆ ಸಂಬಂಧಿಸಿದಂತೆ ಅಧ್ಯಯನ ನಡೆಸಬೇಕು ಎಂದರೆ ವ್ಯಾಪ್ತಿ ಅಥವಾ ಅದರ ಎಲ್ಲೆ ಈ ಸಂಶೋಧನೆಗೆ ಮುಖ್ಯ. ನಾನು ತೆಗೆದುಕೊಂಡ ವ್ಯಾಪ್ತಿಯ ಒಳಗಡೆ ಅಧ್ಯಯನ ಕೈಗೊಳ್ಳಬೇಕು. ಅದನ್ನು ಮೀರಿ ಸಂಶೋಧನೆ ಮಾಡಲು ಅಸಾಧ್ಯ. ಏಕೆಂದರೆ ಸಂಶೋಧಕನನ್ನು ದಾರಿ ತಪ್ಪಿಸುವ ಕೆಲಸ ಮಾಡುತ್ತದೆ. ಆಗ ಸಂಶೋಧನೆ ಯಶಸ್ವಿಯಾಗುವುದಿಲ್ಲ.

ಪ್ರಸ್ತುತ ಅಧ್ಯಯನದ ವ್ಯಾಪ್ತಿಯು **ಮಹಾರಾಷ್ಟ್ರದ ಕನ್ನಡ ಶಾಸನೋಕ್ತ ಸ್ಥಳನಾಮಗಳು** ಎಂಬ ವಿಷಯಕ್ಕೆ ಮಾತ್ರ ಸಂಬಂಧಿಸಿದೆ. ಮಹಾರಾಷ್ಟ್ರದಲ್ಲಿ ದೊರೆತಿರುವ ಕನ್ನಡ ಶಾಸನಗಳಲ್ಲಿ ಉಲ್ಲೇಖಗೊಂಡಿರುವ ಸ್ಥಳನಾಮಗಳನ್ನು ಕುರಿತಾಗಿ ಪ್ರಸ್ತುತ ಅಧ್ಯಯನವನ್ನು ಸೀಮಿತಗೊಳಿಸಿಕೊಳ್ಳಲಾಗಿದೆ.

### ೧.೩ ಅಧ್ಯಯನದ ಸ್ವರೂಪ

ಪ್ರಸ್ತುತ ಅಧ್ಯಯನಕ್ಕೆ ಮಾಹಿತಿ ಮತ್ತು ವಿವರಗಳನ್ನೊಳಗೊಂಡಂತೆ ವಿಶ್ಲೇಷಣಾತ್ಮಕವಾಗಿರುತ್ತದೆ. ಪ್ರಮುಖವಾಗಿ ಮಹಾರಾಷ್ಟ್ರದ ಕನ್ನಡ ಶಾಸನೋಕ್ತ ಸ್ಥಳನಾಮಗಳು ಯಾವ ಹಿನ್ನೆಲೆಯಲ್ಲಿ ಬಳಕೆಯಾಗಿದೆ, ಎಂಬುದನ್ನು ನನ್ನ ಸಂಶೋಧನಾ ಸಂಪ್ರಬಂಧದಲ್ಲಿ ಐದು ಅಧ್ಯಾಯಗಳಾಗಿ ವಿಂಗಡಿಸಿಕೊಳ್ಳಲಾಗಿದ್ದು ಪ್ರತಿಯೊಂದು ಅಧ್ಯಾಯವು ಉಪಶೀರ್ಷಿಕೆಗಳನ್ನೊಳಗೊಂಡಿದೆ.

ಮೊದಲನೆ ಅಧ್ಯಾಯವು ಅಧ್ಯಯನದ ಉದ್ದೇಶ, ವ್ಯಾಪ್ತಿ, ಸ್ವರೂಪ ಮತ್ತು ವಿಧಾನಕ್ಕೆ ಸಂಬಂಧಿಸಿದ್ದು ಈ ಅಧ್ಯಯನಕ್ಕೆ ಸಹಾಯವಾದ ಆಕರಗಳು ಸೇರಿದಂತೆ ಮಹಾರಾಷ್ಟ್ರದ ಕನ್ನಡ ಶಾಸನಗಳ ಬಗ್ಗೆ ಈ ಹಿಂದೆ ನಡೆದಿರುವ ಅಧ್ಯಯನಗಳನ್ನು ಗ್ರಹಿಸಿ ಆ ಮೂಲಕ ಚರ್ಚಿಸಲಾಗಿದೆ. ಈ ವಿವರಗಳು ಪ್ರಸ್ತುತ ಸಂಶೋಧನಾ ಅಧ್ಯಯನಕ್ಕೆ ಅಗತ್ಯವಾದ ಹಿನ್ನೆಲೆಯನ್ನು ರೂಪಿಸಿಕೊಡುತ್ತದೆ.

ಎರಡನೆಯ ಅಧ್ಯಾಯದಲ್ಲಿ ಸ್ಥಳನಾಮದ ಅರ್ಥ ಹಾಗೂ ಯಾವ ಯಾವ ವಿದ್ವಾಂಸರು ಚರ್ಚಿಸಿದ್ದಾರೆ, ಸ್ಥಳನಾಮಗಳ ಅಧ್ಯಯನ ಯಾವಾಗ ಪ್ರಾರಂಭವಾಗಿ ಹೇಗೆ ಬೆಳವಣಿಗೆ ಹೊಂದುತ್ತಿದೆ. ಹಾಗೂ ಸ್ಥಳನಾಮಗಳ ಕುರಿತು ವಿದ್ವಾಂಸರುಗಳು ಮಾಡಿಕೊಂಡಿರುವ ವಿಭಾಗೀಕರಣಗಳನ್ನು ಕುರಿತು ಪ್ರಸ್ತುತ ಸಂಪ್ರಬಂಧದಲ್ಲಿ ತಿಳಿಸಲಾಗಿದೆ.

ಮೂರನೆಯ ಅಧ್ಯಾಯದಲ್ಲಿ ಪ್ರಾಚೀನ ಕರ್ನಾಟಕ ಶಾಸನಗಳಲ್ಲಿ ಸ್ಥಳನಾಮಗಳು ಯಾವ ಶಾಸನದಲ್ಲಿ ಉಲ್ಲೇಖಗೊಂಡಿದೆ. ಹಾಗೂ ಅವು ಹೇಗೆ ಬದಲಾವಣೆ ಹೊಂದುತ್ತಾ ಬಂದಿವೆ ಎಂಬುದನ್ನು ಇಟ್ಟುಕೊಂಡು ಈ ಅಧ್ಯಾಯದಲ್ಲಿ ಚರ್ಚಿಸಲಾಗಿದೆ.

ನಾಲ್ಕನೆಯ ಅಧ್ಯಾಯದಲ್ಲಿ ಮಹಾರಾಷ್ಟ್ರದ ಶಾಸನೋಕ್ತ ಸ್ಥಳನಾಮಗಳ ವಿಶ್ಲೇಷಣೆಯನ್ನು ಸ್ಥಳನಾಮಗಳು ಯಾವ ಹಿನ್ನೆಲೆಯಲ್ಲಿ ಬಳಕೆಗೆ ಬಂದಿದೆ ಎಂಬುದನ್ನು ಹಾಗೂ ಸ್ಥಳನಾಮಗಳ ಭಾಷಿಕ ನೆಲೆಗಟ್ಟನ್ನು ಇಟ್ಟುಕೊಂಡು ಈ ಅಧ್ಯಾಯದಲ್ಲಿ ವಿಶ್ಲೇಷಿಸಲಾಗಿದೆ.

ಐದನೆಯ ಅಧ್ಯಾಯವು ಸಮಾರೋಪವಾಗಿದ್ದು ಪ್ರಸ್ತುತ ಅಧ್ಯಯನದಲ್ಲಿನ ಒಟ್ಟು ಫಲಿತಗಳನ್ನು ಹಾಗೂ ಅದರ ಮಿತಿಗಳ ಬಗ್ಗೆ ತಿಳಿಸಲಾಗಿದ್ದು ಹಾಗೆಯೇ ಈ ಅಧ್ಯಾಯಕ್ಕೆ ಸಂಬಂಧಿಸಿದಂತೆ ಮಹಾರಾಷ್ಟ್ರದ ಕನ್ನಡ ಶಾಸನಗಳ ಕುರಿತು ಪ್ರಸ್ತುತ ಅಧ್ಯಯನದಲ್ಲಿ ಕಂಡುಕೊಂಡ ಫಲಿತವನ್ನು ಮತ್ತು ಮುಂದೆ ಕೈಗೊಳ್ಳಬಹುದಾದ ಅಧ್ಯಯನದ ವಿಧಾನವನ್ನು ತಿಳಿಸಲಾಗಿದೆ ಈ ಅಧ್ಯಾಯದ ಅನುಬಂಧದಲ್ಲಿ ಆಕರ ಗ್ರಂಥಗಳನ್ನು ಹಾಗೂ ನಕ್ಷೆಯನ್ನು ನೀಡಲಾಗಿದೆ.

## ೧.೪ ಅಧ್ಯಯನದ ವಿಧಾನ

ಪ್ರತಿಯೊಂದು ಅಧ್ಯಯನಕ್ಕೂ ತನ್ನದೇ ಆದ ವಿಧಾನ ಎಂಬುದು ಇದೆ. ಈ ಅಧ್ಯಯನವನ್ನು ಯಾವ ಬಗೆಯಲ್ಲಿ ಹೇಳಲಾಗಿದೆ, ಅಲ್ಲಿ ಅಧ್ಯಯನಕ್ಕೊಳಪಡಿಸಿದ ವಿಷಯವನ್ನು ವಿಶ್ಲೇಷಿಸಿದ ಬಗೆ ಯಾವುವು, ಅಧ್ಯಯನಕ್ಕೆ ಒಳಪಡಿಸಿದ ವಿಷಯವನ್ನು ಗುರುತಿಸುವ ಪರಿಯನ್ನು ಕುರಿತು ಹೇಳುವುದೇ ವಿಧಾನವಾಗಿದೆ. ಅಂತೆಯೇ ಪ್ರಸ್ತುತ ಅಧ್ಯಯನವನ್ನು ಕೈಗೊಳ್ಳುವ ಮುನ್ನ ಮಹಾರಾಷ್ಟ್ರದ ಕನ್ನಡ ಶಾಸನಗಳಿಗೆ ಸಂಬಂಧಿಸಿದಂತೆ ಈಗಾಗಲೇ ಸಂಶೋಧನೆ ಆಗಿರುವ ವಿಷಯಗಳನ್ನು ಕುರಿತು ಮಾರ್ಗದರ್ಶಕರಿಂದ ಸಲಹೆಯನ್ನು ಪಡೆದುಕೊಳ್ಳಲಾಯಿತು. ಹಾಗೂ ವಿಷಯವನ್ನೂ ಆಯ್ಕೆ ಮಾಡಿಕೊಳ್ಳಲಾಯಿತು. ವಿಷಯದ ಆಯ್ಕೆಯ ನಂತರ ಮಹಾರಾಷ್ಟ್ರದಲ್ಲಿನ ಕನ್ನಡ ಶಾಸನಗಳನ್ನು ಸಂಗ್ರಹಿಸಿ ಅದರಲ್ಲಿ ಉಲ್ಲೇಖಗೊಂಡ ಸ್ಥಳನಾಮಗಳನ್ನು ಸಂಗ್ರಹಿಸಲಾಗಿದೆ. ಆನಂತರ ಅವನ್ನು 'ಅ' ಕಾರಾದಿಯಾಗಿ ದಾಖಲಿಸಿಕೊಳ್ಳಲಾಗಿದೆ. ಸ್ಥಳನಾಮದ ಕುರಿತು ವಿವೇಚಿಸುವಾಗ ಯಾವ ವ್ಯಕ್ತಿಗಳನ್ನು ಭೇಟಿ ಮಾಡಿ ಮಾಹಿತಿ ಪಡೆದುಕೊಳ್ಳಬೇಕು ಮತ್ತು ದಾವಣಗೆರೆ ವಿಶ್ವವಿದ್ಯಾಲಯದ ಗ್ರಂಥಾಲಯ ಹಾಗೂ ಕನ್ನಡ ವಿಶ್ವವಿದ್ಯಾಲಯದ ಗ್ರಂಥಾಲಯಗಳಿಗೆ ಭೇಟಿ ನೀಡಿ ಅಧ್ಯಯನಕ್ಕೆ ಸಂಬಂಧಿಸಿದಂತೆ ಎಂ.ಫಿಲ್ ಸಂಪ್ರಬಂಧಗಳು, ಪಿ.ಎಚ್‌ಡಿ ಮಹಾಪ್ರಬಂಧಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗಿದ್ದು, ಈ ರೀತಿಯಾಗಿ ಪ್ರಸ್ತುತ ಸಂಪ್ರಬಂಧವನ್ನು ಸಿದ್ಧಪಡಿಸಲಾಗಿದೆ.

ಅಧ್ಯಾಯ-೦೨

## ಸ್ಥಳನಾಮಗಳ ವಿವೇಚನೆ

೨.೧ ಸ್ಥಳನಾಮದ ಅರ್ಥ

೨.೨ ಸ್ಥಳನಾಮದ ಹುಟ್ಟು ಮತ್ತು ಬೆಳವಣಿಗೆ

೨.೩ ಸ್ಥಳನಾಮಗಳ ವಿಭಾಗೀಕರಣ

# ಅಧ್ಯಾಯ-೦೨

# ಸ್ಥಳನಾಮಗಳ ವಿವೇಚನೆ

## ೨.೧ ಸ್ಥಳನಾಮದ ಅರ್ಥ

ಸ್ಥಳನಾಮ ಎಂದರೆ 'ಊರ ಹೆಸರು' ಎಂದರ್ಥ. ಇಂಗ್ಲೀಷ್‌ನಲ್ಲಿ ಸ್ಥಳನಾಮ ಶಾಸ್ತ್ರಕ್ಕೆ 'Toponomy' ಎಂಬ ಹೆಸರಿದೆ. ಇದು ಮೂಲತಃ ಗ್ರೀಕ್ ಭಾಷೆಯಿಂದ ಬಂದದ್ದು. Tops ಎಂದರೆ ಸ್ಥಳಗಳು –Place, 'nomos' ಎಂದರೆ 'a Study of' ಎಂದರ್ಥ ಅಂದರೆ Toponomy (Toponymy) ಎಂಬುದು ಸ್ಥಳದ, ಕ್ಷೇತ್ರದ ಅಧ್ಯಯನ ಎಂದಾಗುತ್ತದೆ. ಇತ್ತೀಚೆಗೆ ಅದೊಂದು ವಿಜ್ಞಾನ ಶಾಖೆಯಾಗಿ ಸುವ್ಯವಸ್ಥಿತ ಶಾಸ್ತ್ರವಾಗಿ ಬೆಳೆದು ಬಂದಿದೆ. ಆದ್ದರಿಂದ ಅದನ್ನು a science of places - placenames ಸ್ಥಳಗಳನ್ನು–ಸ್ಥಳನಾಮಗಳನ್ನು ಕುರಿತು ಅಧ್ಯಯನ ಮಾಡುವ ವಿಜ್ಞಾನವೇ ಎಂದು ವ್ಯಾಖ್ಯಾನಿಸಬಹುದು. ಪಾರಿಭಾಷಿಕ ಪ್ರಾಕೃತಿಕ ಮತ್ತು ಸಾಂಸ್ಕೃತಿಕ ವೈಲಕ್ಷಣಗಳೆರಡನ್ನು ಇದು ಒಳಗೊಂಡಿದೆ[೧].

ಭಾರತದಲ್ಲಿ ಭೌಗೋಳಿಕನಾಮ ಅಥವಾ ದೇಶನಾಮಗಳಿಗೆ ಪ್ರಾದೇಶಿಕ ಭಾಷೆಗಳಾದ ಸಂಸ್ಕೃತದಲ್ಲಿ–ಗ್ರಾಮನಾಮ, ತೆಲುಗಿನಲ್ಲಿ–ಊರ್ಲಪೇರ್ಲ, ತಮಿಳಿನಲ್ಲಿ–ಇಡೈಪೆಯರ್, ಕನ್ನಡದಲ್ಲಿ–ಊರಹೆಸರು, ಮಲೆಯಾಳಂನಲ್ಲಿ–ನಾಟ್ಟುಪೇರು, ಹಿಂದಿಯಲ್ಲಿ–ಮುಖಾಮ್‌ನಾಮ್, ಉರ್ದುವಿನಲ್ಲಿ–ಸ್ಥಳ್‌ನಾಮ್, ಮುಂತಾದ ಪರ್ಯಾಯ ಪದಗಳನ್ನು ಬಳಸಲಾಗಿದೆ[೨] ಊರು, ಗ್ರಾಮ, ನಾಡು, ದೇಶ ಮುಂತಾದ ಪದಗಳಿಗೆ ಪಾರಂಪರಿಕವಾದ ಸೀಮಿತ ಅರ್ಥಗಳಿರುವುದರಿಂದ ಉಳಿದ ಸಾಮುದಾಯಿಕ ಮಾನವನ ನೆಲೆಗಳ ಅರ್ಥವನ್ನು ಅವು ಒಳಗೊಳ್ಳುವವು. ಆದುದರಿಂದ ಇಲ್ಲಿ ಹೊಸದಾಗಿ ಬಳಕೆಗೆ ಬಂದಿರುವ ಸ್ಥಳನಾಮ ಎಂಬ ಪದವನ್ನು ಹೆಚ್ಚು ಸಮರ್ಪಕವೆಂದು ಬಳಸಬಹುದು. ಸ್ಥಳನಾಮಗಳು ಮಾನವರ ಸಣ್ಣ ನೆಲೆಯಿಂದ ಆರಂಭಿಸಿ ಅತಿ ದೊಡ್ಡ ಮಾನವ ವಸಾಹತು ನೆಲೆಗಳ ಅರ್ಥವನ್ನು ಹೊಂದಿದೆ.

ಸ್ಥಳನಾಮ ವಿಜ್ಞಾನ ಎಂಬುದು ತನ್ನ ನಿಜಾರ್ಥದಲ್ಲಿ ಮಾನವನ ವಾಸ್ತವ್ಯ ಸ್ಥಳಗಳನ್ನಷ್ಟೇ ಅಲ್ಲದೆ ವಾಸ್ತವ್ಯವಿರದ ಸ್ಥಳಗಳ ಹೆಸರಿನ ಅಧ್ಯಯನವನ್ನು ಒಳಗೊಂಡಿದೆ. ಸ್ಥಳಗಳು, ಕ್ಷೇತ್ರಗಳು, ವಸಾಹತುಗಳು ಮುಂತಾದವುಗಳ ಹೆಸರಿಗೆ ಸಂಬಂಧಿಸಿದ ಅತ್ಯಂತ ಸೂಕ್ಷ್ಮ ವಿವರಗಳನ್ನು ಒಳಗೊಳ್ಳುವ ಈ ಅಧ್ಯಯನಕ್ಕೆ 'ಸ್ಥಳನಾಮವಿಜ್ಞಾನ' ಎಂದು ಕರೆಯಲಾಗಿದೆ. ಇದು ಊರುಗಳು, ಪರ್ವತಗಳು, ನದಿಗಳು, ಹೊಲ, ತೋಟಗಳು, ಬೀದಿಗಳು, ಮನೆಗಳು, ರಸ್ತೆಗಳು ಇತ್ಯಾದಿಗಳ ಅಧ್ಯಯನವಾಗಿದೆ. ಸ್ಥಳನಾಮಗಳು ಒಂದು ನಿರ್ದಿಷ್ಟ ಭೂಮಿಕೆಯನ್ನು ಚಿತ್ರಿಸುವ, ಬೆಟ್ಟಗುಡ್ಡ, ನದಿ, ಕೆರೆ, ಹೊಂಡ, ಸಮುದ್ರ, ಮರ, ಗಿಡ, ಬಳ್ಳಿಗಳನ್ನು ಸೂಚಿಸುವ ಕುರುಹುಗಳು, ಪ್ರಾಕೃತಿಕ ಅಂಶಗಳು ಸ್ಥಳನಾಮಗಳ ಸ್ವರೂಪ

ಉಗಮವನ್ನು ಸೂಚಿಸಿದರೆ ಸಾಂಸ್ಕೃತಿಕ ಅಂಶಗಳಿಂದ ಮಾನವನ ನೆಲೆಯನ್ನು ಸೂಚಿಸುವ ಹಳ್ಳಿ, ಪಳ್ಳಿಗಳು ಗ್ರಾಮದ ರಚನೆಯ ಬಗ್ಗೆ ಸ್ಪಷ್ಟ ಚಿತ್ರಣವನ್ನು ಹೇಳುವ ಮೂಲಗಳೇ ಆಗಿವೆ.

**೨.೨ ಸ್ಥಳನಾಮಗಳ ಉಗಮ ಮತ್ತು ವಿಕಾಸ**

ಜಗತ್ತು ಎಂಬುದು ಮಾನವರ ಹುಟ್ಟಿನೊಂದಿಗೆ ವಿಸ್ತಾರವಾದ ಅರ್ಥ ಪಡೆಯಿತು. ಅವನ ಜನನದೊಂದಿಗೆ ಸ್ಥಳನಾಮಗಳಾದ ಊರು, ಕೇರಿ, ಮನೆ, ಮಠ, ಹಿತ್ತಲು, ಗುಡಿಗೋಪುರ ಮತ್ತು ಗುಡಿಸಲುಗಳು ಜನ್ಮ ತಾಳಿದವು. ಮಾನವನ ಬದುಕು ಸದಾ ಪ್ರಕೃತಿಯೊಂದಿಗೆ ಬೆಸೆದುಕೊಂಡಿತ್ತು. ಕಾಲಾನಂತರದಲ್ಲಿ ಅದು ಅವನ ವಲಸೆ ಪ್ರವೃತ್ತಿ ಪ್ರೇರಣೆಯಾಗಿರಬೇಕು. ಮನು ಕುಲ ಒಂದು ಕಡೆ ನೆಲೆ ನಿಲ್ಲಲು ಅಥವಾ ವಾಸ್ತವ್ಯ ಹೂಡಲು ಕಾಡು, ಕಣಿವೆ, ಬೆಟ್ಟ, ಗುಡ್ಡ, ದಿಬ್ಬ, ದಿಣ್ಣೆ, ಮುರಟಿ, ಗುಂದಿ, ಕಲ್ಲು, ಬಂಡೆ, ನದಿ, ಹಳ್ಳ ಕೊಳ್ಳ, ಹೊಳೆ ತೀರಗಳೇ ಅವರ ಪೂರ್ವಾಶ್ರಮದ ನೆಲೆಗಳ ಕುರುಹುಗಳಾದವು. ಪಂಚಭೂತಗಳಾದ ವಾಯು, ಅಗ್ನಿ, ಜಲ, ಆಕಾಶ, ಭೂಮಿಗಳೇ ಅವನ ಆರಾಧ್ಯ ದೈವಗಳಾದವು. ಹೀಗೆ ಪ್ರಾಕೃತಿಕ ಪರಿಸರದ ಅವಿನಾಭಾವ ಸಂಬಂಧದೊಂದಿಗೆ ಬೆರೆತ ಮಾನವ ತನ್ನ ಅಸ್ತಿತ್ವವನ್ನು ಉಳಿಸಿ ಬೆಳೆಸಲು, ಭೂಮಿಯ ಮೇಲೊಂದು ನೆಲೆ ನಿರ್ಮಾಣ ಮಾಡಿ ಬದುಕುಳಿಯಲು ಆಲೋಚಿಸಿದ. ಅನಾಗರೀಕ ಜೀವನದಲ್ಲೇ ಮುಂದುವರೆಯುತ್ತಿದ್ದ ಆದಿಮಾನವನಿಗೆ ಕಾಲಾನಂತರದಲ್ಲಿ ಅವನ ಬೌದ್ಧಿಕ ಬೆಳವಣಿಗೆಯ ಹಿನ್ನೆಲೆಯಲ್ಲಿ ಬೇಟೆಗಾರಿಕೆ, ದನಗಾರಿಕೆ ಮತ್ತು ಕೃಷಿಯ ಮಹತ್ವ ತಿಳಿದು ತನ್ನ ವ್ಯವಹಾರಿಕ ಜೀವನಕ್ಕೆ ಮುಂದಾದ.

ಮಾನವನು ಕೃಷಿ ಸಂಸ್ಕೃತಿಯ ಪ್ರಾರಂಭದ ಸಮಯದಲ್ಲಿ ಅವನು ಒಂದೇ ಕಡೆ ಸ್ಥಿಮಿತವಾಗಿ ನಿಲ್ಲುತ್ತಿರಲಿಲ್ಲ. ಈಗಿನ ಹಕ್ಕಿ-ಪಿಕ್ಕಿಯವರಂತೆಯೋ, ದೊಂಬರಂತೆಯೋ, ಕುರಿಗಾಹಿಗಳಂತೆಯೋ, ನಾಲ್ಕಾರು ದಿನ ಒಂದೆಡೆಯಲ್ಲಿದ್ದು ಮಡಕೆ, ಕುಡಿಕೆ, ತಟ್ಟೆ, ಪುಟ್ಟಿ, ಮಂಕರಿ, ಬಟ್ಟೆಬರಿಗಳನ್ನು ಹೊತ್ತುಕೊಂಡು ಧನ, ಕುರಿ, ನಾಯಿಗಳನ್ನು ಹಿಡಿದುಕೊಂಡು ಮುಂದೆ-ಮುಂದೆ ಸಾಗುತ್ತಿದ್ದರು. ಅನುಕೂಲಕರ ಪರಿಸರದಲ್ಲಿ ಬೀಡು ಬಿಡುತ್ತಿದ್ದರು. ಕಾಲಾನಂತರದಲ್ಲಿ ಅವರ ಬೀಡುಗಳೇ ಹಟ್ಟಿಗಳಾಗುತ್ತಿದ್ದವು. ಹಟ್ಟಿಗಳೇ ಆರಂಭ ಕಾಲದ ವಸತಿಗಳು ಎಂಬುದನ್ನು ಶಂಬಾ ಜೋಶಿಯವರು ಅಭಿಪ್ರಾಯ ಪಟ್ಟಿದ್ದಾರೆ. ಪಾಡು, ಪಾಡಿ, ಪಟ್ಟಣ, ಪೇಟೆ, ಹಾರ, ಅರ, ಅಡಿ, ಬಾಡ, ಬಾಳು, ವಾಡೆ, ವಾಳ, ವಾಟಿ, ವಠಾರ, ಹಾಠ, ಹಾಳು, ಪಾಳ್ಯ, ಪಳ್ಳಿ ಇವೇ ಮೊದಲಾದ ಹತ್ತಾರು ರೂಪಗಳು ಹಟ್ಟಿಯಿಂದ ಸಿದ್ಧವಾಗುತ್ತವೆಂಬ ಗೊಲ್ಲ, ಗೋವಳ, ಗೌಳಿಕ, ಗಾವುಂಡ, ಗೌಡ ಪದಗಳು ಜ್ಞಾತಿ ಸಂಬಂಧಿಗಳೆಂಬ ಅವರ ನಿರ್ಣಯ ಸಾಧುವಾದುದೆಂದೇ ಹೇಳಬೇಕಾಗುತ್ತದೆ.

ಸ್ಥಳನಾಮಗಳ ಹುಟ್ಟು ನಿನ್ನೆ ಮೊನ್ನೆಯದಲ್ಲ. ಅವು ಮಾನವನಷ್ಟೇ ಹಳೆಯವು ಹಾಗೂ ಅವು ಪುರಾತನ ಜೀವನ ಸೃಷ್ಟಿಯ ಪಳೆಯುಳಿಕೆಗಳು. ಮಾನವನ ದೈನಂದಿನ

ಬದುಕು ಬಹಳ ಗಂಭೀರವಾದಂತೆಲ್ಲ ಪ್ರಾಕೃತಿಕ, ಐತಿಹಾಸಿಕ, ಸಾಮಾಜಿಕ, ಧಾರ್ಮಿಕ ಮತ್ತು ಜಾನಪದೀಯ ಅಂಶಗಳ ಮೂಲಕ ಸಾಂಸ್ಕೃತಿಕ ನೆಲೆಗಟ್ಟಿನ ಮೇಲೆ ಸ್ಥಳನಾಮಗಳು ಹುಟ್ಟಿಕೊಂಡವು. ಈ ಹಿನ್ನೆಲೆಯನ್ನು ಆಧರಿಸಿ ಜನ್ಮತಾಳಿದ ವಾಸ್ತವ್ಯಗಳೇ ಆದ ಊರು, ಕೇರಿ, ಬೀದಿ, ಗುಡಿ, ಕೋಡಿ, ಕೆರೆ, ಕಟ್ಟೆ, ಕೋಟೆ, ಕೊತ್ತಲು, ನದಿ, ತಟಾಕ, ಬಾವಿ, ರಸ್ತೆ, ವೃತ್ತ, ಸಂದ್ರ, ಸಮುದ್ರ, ಸಾಗರ, ಗ್ರಾಮ, ಇತ್ಯಾದಿಗಳು ಸ್ಥಳನಾಮದ ಅಂತ್ಯ ಪ್ರತ್ಯಯಗಳಾಗಿ ಶಾಶ್ವತತೆಯ ನೆಲೆಯಲ್ಲಿ ಅವು ಚಲಾವಣೆಗೆ ಬಂದವು. ಹೀಗೆ ಸ್ಥಳನಾಮಗಳ ಉಗಮಕ್ಕೆ ಪೂರಕವಾದ ಅಂಶಗಳನ್ನು ಈ ಕೆಳಗೆ ಕಾಣಿಸಿರುವಂತೆ ಎರಡು ಪ್ರಕಾರಗಳಾಗಿ ವರ್ಗೀಕರಿಸಬಹುದು. ೧)ಪ್ರಾಕೃತಿಕ ಕಾರಣಗಳು ೨)ಸಾಂಸ್ಕೃತಿಕ ಕಾರಣಗಳು

**೧) ಪ್ರಾಕೃತಿಕ ಸ್ಥಳನಾಮಗಳು**

ಪ್ರಕೃತಿ ದತ್ತವಾಗಿ ತನಗೆ ತಾನೇ ರೂಪುಗೊಂಡಿರುವ ಅನೇಕ ಅವಶೇಷಗಳು ಸ್ಥಳನಾಮಗಳ ಉಗಮಕ್ಕೆ ಕಾರಣಗಳಾಗಿವೆ.

೧. ಉನ್ನತ ಭೂಸ್ವರೂಪಗಳಾದ ಬೆಟ್ಟ, ಗುಡ್ಡ, ಪರ್ವತ, ಮಲೆ, ಗಿರಿ, ಬೋರೆ, ದಿಣ್ಣೆ, ದಿಬ್ಬ, ದಡಗಳಿಂದ ಉಗಮವಾದ ಸ್ಥಳನಾಮಗಳು- ಬೆಟ್ಟದಹಳ್ಳಿ, ಬೆಟ್ಟದಪುರ, ಕನಕಗಿರಿ, ಬಿಳಿಗಿರಿರಂಗನಬೆಟ್ಟ, ಮಧುಗಿರಿ, ಮಲೆಯೂರು, ನಾಗರಘಟ್ಟ, ಬೆಟ್ಟಸೋಗೆ, ದಡದಹಳ್ಳಿ, ಮಲೆಮಹದೇಶ್ವರಬೆಟ್ಟ, ಬೂದಿತಿಟ್ಟು ಇತ್ಯಾದಿ.

೨. ಅರಣ್ಯಗಳಿಂದ ಉಗಮವಾದ ಸ್ಥಳನಾಮಗಳು- ಕಾಡುಮನೆ, ವನಗೂರು, ಮಧುವನಹಳ್ಳಿ, ಕಾಡಹಳ್ಳಿ, ಬನಹಳ್ಳಿ, ಕಾಡನೂರು ಇತ್ಯಾದಿ.

೩. ಶಿಲೆಗಳಿಂದ ಉಗಮವಾದ ಸ್ಥಳನಾಮಗಳು- ಕಲ್ಕುಂದ, ಕಲ್ಲಹಳ್ಳಿ, ಕಲ್ಪುರ, ಕಲ್ಲಾರೆ, ಬಂಡೆಹಳ್ಳಿ ಇತ್ಯಾದಿ.

೪. ಪ್ರಾಣಿ-ಪಕ್ಷಿಗಳಿಂದ ಬಂದ ಸ್ಥಳನಾಮಗಳು- ನರಿಪುರ, ನವಿಲೂರು, ಕಾಗೇಪುರ, ಕುರಿಹುಂಡಿ, ಮಂಗನಹಳ್ಳಿ, ಹುಲಿಯೂರುದುರ್ಗ, ಕರಡಿಹಳ್ಳಿ, ಕೋಳಿಪಾಳ್ಯ, ಚಿಲಕವಾಡಿ, ಗೂಳಿಪುರ, ಎಮ್ಮೆದೊಡ್ಡಿ, ಕುದುರೆಮಾಳ, ಎತ್ತಿನಕಟ್ಟೆ ಇತ್ಯಾದಿ.

೫. ಸಸ್ಯಗಳಿಂದ ಬಂದ ಸ್ಥಳನಾಮಗಳು- ಅರಳೀಪುರ, ಅರಳಿಕಟ್ಟೆ, ಆಲದೂರು, ನುಗ್ಗೆಹಳ್ಳಿ, ನೇರಳೆ, ಬದನಹಾಳು, ಬಿದರಹಳ್ಳಿ, ಬೇಗೂರು ಮುತ್ತಿಗೆ, ಹಂಚಿತಾಳಪುರ, ಹುಣಸೂರು.

೬. ಜಲಸೂಚಕಗಳಿಂದ ಉಗಮವಾದ ಸ್ಥಳನಾಮಗಳು- ಹೊಳೆಸಾಲು, ಕೂಡಲೂರು, ಕೆರೆಹಳ್ಳಿ, ಚಿಕ್ಕಹೊಳೆ, ಬಂಡಿಗೆರೆ, ಕೋಡಿಮೋಳೆ, ಬಾವಿಕೆರೆ, ಯಡತೊರೆ, ರಾಮಸಮುದ್ರ, ಲಕ್ಷ್ಮೀಸಾಗರ ಇತ್ಯಾದಿ.

೭. ಬೇಸಾಯ ಮೂಲದಿಂದ ಉಗಮವಾದ ಸ್ಥಳನಾಮಗಳು- ಕೆರೆಬೈಲು, ತೋಟದಮನೆ, ಮೇಲ್ಮಾಳ, ನೇಗಿಲೂರು, ರಾಗಿಬೊಮ್ಮನಹಳ್ಳಿ, ಜೋಳದರಾಶಿ, ಗದ್ದೆಹಳ್ಳಿ, ಹಕ್ಕಿಬೈಲು, ಹೊಂಡರಬಾಳು ಇತ್ಯಾದಿ.

೮. ಲೋಹಗಳಿಂದ ಉಗಮವಾದ ಸ್ಥಳನಾಮಗಳು- ಚಿನ್ನದಗುಡಿಹುಂಡಿ, ಮಣಿಪುರ, ಬಂಗಾರಪೇಟೆ, ರತ್ನಪುರ, ಹೊನ್ನೂರು ಇತ್ಯಾದಿ.

೯. ಆಹಾರ ಸಾಮಗ್ರಿಗಳಿಂದ ಬಂದ ಸ್ಥಳನಾಮಗಳು- ಉದ್ದೂರು, ಕಡಬೂರು, ಗಂಜಿಗಟ್ಟೆ, ತುಪ್ಪೂರು, ಮಜ್ಜಿಗೆಪುರ, ಮೊಸರಹಳ್ಳಿ, ಹಾಲಹಳ್ಳಿ ಇತ್ಯಾದಿ.

೧೦. ಮನುಷ್ಯನ ದೇಹದ ಅಂಗಾಂಗಗಳಿಂದ ಬಂದ ಸ್ಥಳನಾಮಗಳು- ಕಣ್ಣೂರು, ಉಗರೂರು, ಬೆನ್ನೂರು, ಮೂಗೂರು, ಹೆಡತಲೆ, ಮೊಳಕಾಲ್ಮೂರು ಇತ್ಯಾದಿ.

## ೦೨) ಸಾಂಸ್ಕೃತಿಕ ಸ್ಥಳನಾಮಗಳು

ಈ ಭೂಮಿಯ ಮೇಲೆ ಮಾನವನ ನೆಲೆ ಎಂದು ನಿಶ್ಚಯವಾಯಿತೋ ಅಂದೇ ವ್ಯಕ್ತಿ ಬದುಕಿಗೆ ಪೂರಕವಾದ ಭೌಗೋಳಿಕ ಅಂಶಗಳು ಹೆಚ್ಚು ಪ್ರಚಾರಕ್ಕೆ ಬಂದವು. ಈ ಹಿನ್ನಲೆಯಲ್ಲಿ ಮಾನವ ಪ್ರಪಂಚ ಅಭಿವೃದ್ಧಿಯಾಗಿ ಸಾಂಸ್ಕೃತಿಕ ವಲಯ ಕೂಡ ವಿಕಾಸವಾಯಿತು. ರಾಜ, ಮಹಾರಾಜ, ಸಂಸ್ಥಾನಾಧಿಪತಿಗಳು, ಪಾಳೆಯಪಟ್ಟುಗಳು, ಸಾಮಂತರು, ಪ್ರಾಂತ್ಯ, ನಾಡು, ದೇಶ, ಖಂಡ, ಮತ್ತು ಉಪಖಂಡಗಳು ಅಸ್ತಿತ್ವಕ್ಕೆ ಬಂದವು. ಆಡಳಿತ ವ್ಯವಸ್ಥೆಯು ಮಾನವನ ಅತಿಸಣ್ಣ ನೆಲೆಯಾದ ಗ್ರಾಮ, ಹಳ್ಳಿಯಿಂದ ಹಿಡಿದು ನಾಡು, ದೇಶದಂತಹ ಅತಿದೊಡ್ಡ ನೆಲೆಯವರೆಗೂ ವಿಸ್ತರಿಸಿತು. ಈ ಗ್ರಾಮ ಹಳ್ಳಿಗಳ ಉಸ್ತುವಾರಿಯನ್ನು ನೋಡುವುದಕ್ಕಾಗಿ ಪಟೇಲ, ದೇಶಿಶೆಟ್ಟಿ, ಗೌಡ ಇದ್ದರೆ, ರಾಜ್ಯ, ಸಾಮ್ರಾಜ್ಯ, ಪ್ರಾಂತ್ಯದ ಅಧಿಕಾರ, ರಾಜ, ಯುವರಾಜ, ಪ್ರಭುಗಳ ವಶದಲ್ಲಿತ್ತು. ಅಲ್ಲದೆ ಪ್ರಾಂತ್ಯದ ಜವಾಬ್ದಾರಿಯುತವಾದ ಆಡಳಿತ ನಿರ್ವಹಣೆಯಲ್ಲಿ ಮಹಾಮಂತ್ರಿ, ಸೇನಾಧಿಪತಿ, ದಂಡನಾಯಕ, ಆಡಳಿತಾಧಿಕಾರಿ, ಸಂಧಿವಿಗ್ರಹಿ, ಪಶುಪತಿಗಳಿರುತ್ತಿದ್ದರು. ಈ ಆಡಳಿತ ತಂತ್ರಗಾರಿಕೆಯಲ್ಲಿ ಸಾಮ್ರಾಜ್ಯದ ಪ್ರಭುವಾದವನು ಪ್ರತಿಯೊಬ್ಬರಿಗೂ ಅವರ ಯೋಗ್ಯತೆಗೆ ಅನುಗುಣವಾಗಿ ಕೆಲವು ಗ್ರಾಮ, ನಾಡು, ಪ್ರಾಂತ್ಯಗಳನ್ನು ಅವರ ಹೆಸರಿನಲ್ಲಿ ಬಿಟ್ಟುಕೊಡುತ್ತಿದ್ದನು. ಅವು ಕಾಲಕ್ರಮೇಣ ಅವರ ಹೆಸರಿನಲ್ಲಿ ಚಲಾವಣೆಗೆ ಬಂದವು. ಅದೇ ರೀತಿ ಯುದ್ಧ ಮತ್ತು ಸಾಹಸ ಕೆಲಸಕಾರ್ಯಗಳಲ್ಲಿ ಮಡಿದವರಿಗೆ, ದೇವಸ್ಥಾನದ ಪೂಜೆ ವಿಧಿ-ವಿಧಾನಗಳಲ್ಲಿ ಭಾಗಿಯಾದ ಬ್ರಾಹ್ಮಣರಿಗೆ ಬಿಟ್ಟ ಗ್ರಾಮಗಳು ಅವರ ಹೆಸರಿನಲ್ಲಿ ಜನ್ಮ ತಾಳಿದವು. ಅಲ್ಲದೆ ಸಮಾಜದಲ್ಲಿ ತಲತಲಾಂತರದಿಂದ ತಮ್ಮ ಕಸುವಿನ ಕಾಯಕವನ್ನೇ ಮುಂದುವರೆಸಿಕೊಂಡು ಬಂದವರ ಹೆಸರಿನಲ್ಲಿ ವಾಸ್ತವ್ಯದ ನೆಲೆಗಳು ಅಸ್ತಿತ್ವಕ್ಕೆ ಬಂದವು. ಒಟ್ಟಿನಲ್ಲಿ ಮಾನವನ ಸಾಂಸ್ಕೃತಿಕ ವಿಕಸನದ ಸಂದರ್ಭದಲ್ಲಿ ಇಂಥ ಹತ್ತಾರು ಅಂಶಗಳು ಅವನ ಬದುಕಿನ ನೆಲೆಗಳಿಗೆ ಪೂರಕವಾಗಿವೆ.

೧) ಐತಿಹಾಸಿಕ ಘಟನಾವಳಿಗಳ ಪ್ರಭಾವದಿಂದ ಬಂದ ಸ್ಥಳನಾಮಗಳು- ಎಣ್ಣೆನಾಡು, ಕಾರೆನಾಡು, ವಳನಾಡು, ಪೆರಿಯನಾಡು, ಕೊಂಗನಾಡು, ಹದಿನಾಡು, ಹೊಸನಾಡು.

೨) ಜಾತಿಮೂಲದಿಂದ ಸ್ಥಳನಾಮಗಳ ಉಗಮ– ಈಡಿಗನೂರು, ಕುರುಬರಹುಂಡಿ, ಮಾದಿಗರಹಳ್ಳಿ, ಹಾರ್ನಳ್ಳಿ, ಗೌಡಿಗೆರೆ, ಹೊಲೆಯರಹಳ್ಳಿ, ಜಂಗಮಹಳ್ಳಿ.

೩) ಧರ್ಮದ ಮೂಲದಿಂದ ಸ್ಥಳನಾಮಗಳ ಉಗಮ– ಮಹಾವೀರನಗರ, ಜೈನಹಳ್ಳಿ, ಬಸ್ತೀಪುರ, ಸಿದ್ಧಾರ್ಥನಗರ, ಬುದ್ಧಗಯ, ಗೌತಮನಗರ, ಮಹಮ್ಮದ್‌ನಗರ, ಇಸ್ಲಾಂಪುರ, ಶಹಾಪುರ.

೪) ವೃತ್ತಿ ಕಸುಬುಗಳಿಂದ ಸ್ಥಳನಾಮಗಳ ಉಗಮ– ವಿವಿಧ ವೃತ್ತಿ ಕಸುಬುಗಳನ್ನಾಧರಿಸಿ ಬದುಕುತ್ತಿದ್ದ ಜನರು ಒಂದೇ ಕಡೆ ಶಾಶ್ವತವಾಗಿ ನೆಲೆನಿಂತರೆ ಆ ಕಸುಬಿನ ನಾಮಾಂಕಿತವನ್ನೇ ಒಳಗೊಂಡ ಸ್ಥಳನಾಮಗಳು ಜನ್ಮತಾಳುತ್ತವೆ ಉದಾಹರಣೆಗೆ–

ಅಗ್ರಹಾರ: ಬ್ರಾಹ್ಮಣರಿಗೆ ದತ್ತಿಯಾಗಿ ಬಿಟ್ಟಸ್ಥಳ. ಊರಿನ ಎಲ್ಲಾ ದೇವತಾ ಕಾರ್ಯಗಳನ್ನು, ಯಜ್ಞ ಯಾಗಾದಿ ಮತ್ತು ಜ್ಯೋತಿಷ್ಯವನ್ನು ಹೇಳಿಕೊಂಡು ಜೀವಿಸುತ್ತಿದ್ದ ಬ್ರಾಹ್ಮಣ ಮೂಲನೆಲೆ ಇದಾಗಿದೆ.

ಉದಾಹರಣೆ: ಅಗರ, ಮಂಗಲ, ಮೂಡಲ ಅಗ್ರಹಾರ, ಚೆನ್ನಾದೇವಿ ಅಗ್ರಹಾರ.

ಬೆಸ್ತರಹಳ್ಳಿ: ಕೆರೆ, ಕೊಳ, ಕಾಲುವೆ ಮತ್ತು ನದಿ ತೀರಗಳಲ್ಲಿ ಬಲೆಗಳನ್ನು ಬೀಸಿ ಮೀನನ್ನು ಹಿಡಿಯುವಂತಹ ಜನ ಸಮುದಾಯದವರು ವಾಸ್ತವ್ಯ ಹೂಡಿದ ಸ್ಥಳವಾಗಿದೆ. ಉದಾಹರಣೆ: ಬೆಸಗರಹಳ್ಳಿ, ಅಂಬಿಗನೂರು, ಬೆಸ್ತಗೇರಿ, ಮತ್ಸ್ಯಪುರ.

ಅಗಸರಳ್ಳಿ: ಬಟ್ಟೆಯನ್ನು ಶುಭ್ರಗೊಳಿಸುವಂತಹ ವೃತ್ತಿಯನ್ನು ಆಶ್ರಯಿಸಿ ಬದುಕುತ್ತಿರುವವರ ನೆಲೆ. ಉದಾಹರಣೆಗೆ: ಅಗಸನಕಲ್ಲು, ಮಡಿವಾಳಪುರ, ಅಗಸನಕಟ್ಟೆ.

ಬಡಗೀಪುರ: ಮನೆಯ ಪೀಠೋಪಕರಣಗಳನ್ನು ಹಾಗೂ ವ್ಯವಸಾಯದ ಸಲಕರಣೆಗಳನ್ನು ತಯಾರಿಸುವ ಜನ ವಾಸಿಸುವ ಸ್ಥಳ

ಕಂಚುಗಾರನ ಹಳ್ಳಿ: ವಿವಿಧ ಬಗೆಯ ಲೋಹಗಳಾದ ಕಂಚು, ತಾಮ್ರ, ಮತ್ತು ಹಿತ್ತಾಳೆಗಳಿಂದ ಹಂಡೆ, ಬಿಂದಿಗೆ, ಪಾತ್ರೆ, ತಟ್ಟೆ, ಲೋಟಗಳನ್ನು ತಯಾರಿಸಿ ಅದನ್ನು ಮಾರಾಟ ಮಾಡಿ ಜೀವನ ನಡೆಸುವ ಜನರಿರುವ ಸ್ಥಳ.

ಕಮ್ಮಾರನಹಳ್ಳಿ: ಕಬ್ಬಿಣದ ಕೆಲಸ ಮಾಡುವ ಜನ ನೆಲೆಸಿರುವ ಗ್ರಾಮ. ಉದಾಹರಣೆಗೆ: ಕಮ್ಮಾರನ ಕೊಪ್ಪಲು, ಗೆಜ್ಜುಗಾರನಹಳ್ಳಿ.

ಚಮ್ಮಾರನಹಳ್ಳಿ: ಹದ ಮಾಡಿದ ಚರ್ಮದಿಂದ ವಿವಿಧ ಬಗೆಯ ವಸ್ತುಗಳನ್ನು ತಯಾರಿಸಿ ಮಾರಿ ಬದುಕುತ್ತಿರುವವರು ನೆಲೆಗೊಂಡಿರುವ ಊರು.

ವಡ್ಡರಹಳ್ಳಿ: ಕಲ್ಲುಕುಟಿಗರು ತಮ್ಮ ವೃತ್ತಿಯನ್ನು ಹಿಡಿದು ವಾಸ್ತವ್ಯ ಹೂಡಿರುವ ಸ್ಥಳ.

ಕುಂಬಾರಹಳ್ಳಿ: ಮಣ್ಣಿನಿಂದ ಮಡಿಕೆ, ಕುಡಿಕೆ ಹೆಂಚು ಇನ್ನಿತರ ವಸ್ತುಗಳನ್ನು ಮಾಡುವಂತಹ ಜನ ನೆಲೆಗೊಂಡಿರುವ ಗ್ರಾಮ.

ಉದಾಹರಣೆಗೆ: ಕುಂಬಾರಕೊಪ್ಪಲು, ಕುಂಬಾರಗುಂಡಿ, ಕುಂಬಾರಘಟ್ಟ ಇತ್ಯಾದಿ

ಗಾಣಿಗನೂರು: ಎಣ್ಣೆಬೀಜಗಳನ್ನು ಕಲ್ಲಿನ ಗಾಣದಲ್ಲಿ ಹಾಕಿ ಎಣ್ಣೆ ತೆಗೆದು ಮಾರಾಟ ಮಾಡುತ್ತಿದ್ದ ವೃತ್ತಿಯವರು ವಾಸ ಮಾಡುವ ಸ್ಥಳ.

ಉದಾಹರಣೆಗೆ: ಗಾಣಿಗರಕೊಪ್ಪ, ಗಾಣಿಗನೂರು, ಗಾಣಿಗನಪುರ ಇತ್ಯಾದಿ

ಕುರುಬೂರು: ಕುರಿಮರಿಗಳನ್ನು ಸಾಕಿಕೊಂಡು ಜೀವನ ನಿರ್ವಹಣೆ ಮಾಡುತ್ತಿದ್ದ ಜನರ ನೆಲೆ.

ಉದಾಹರಣೆಗೆ: ಕುರುಬರಹುಂಡಿ, ಕುರಿಹುಂಡಿ, ಕುರುಬರಹಳ್ಳಿ, ಕುರುಬರಹಟ್ಟಿ ಇತ್ಯಾದಿ

ಗೊಲ್ಲರಹಳ್ಳಿ: ಗೋವುಗಳನ್ನು ಸಾಕಿ ಅವುಗಳಿಂದ ಹಾಲು, ಮೊಸರು, ಬೆಣ್ಣೆ, ಮಜ್ಜಿಗೆಗಳನ್ನು ಕಡೆದು ಮಾರಾಟ ಮಾಡಿ ಜೀವನ ನಿರ್ವಹಣೆ ಮಾಡುವ ಜನರ ಊರು.

ಬೇಡರಪುರ: ಕಾಡಿನೊಳಗೆ ಪ್ರಾಣಿಗಳನ್ನು ಬೇಟೆಯಾಡಿ ಅವುಗಳ ಮಾಂಸ ಮತ್ತು ಚರ್ಮಗಳನ್ನು ಮಾರಾಟಮಾಡಿ ಅದರಿಂದ ಬಂದ ಹಣದಿಂದ ಜೀವನ ನಡೆಸುತ್ತಿದ್ದವರು ನೆಲೆನಿಂತ ಊರು.

ಉದಾಹರಣೆಗೆ: ಬೇಡರಹಳ್ಳಿ, ಬೇಡಮೂಡ್ಲು, ಬೇಡಗುಳಿ ಇತ್ಯಾದಿ

ಹೆಳವನಹುಂಡಿ: ಊರೂರ ಮೇಲೆ ಹೋಗಿ ವಿವಿಧ ಬಗೆಯ ಕಾಯಿಲೆಗಳಿಗೆ ಹಸಿರೌಷಧಿ ಕೊಡುವಂತಹ ಜನರು, ಒಂದೇ ಕಡೆ ನೆಲೆಸಿರುವವರ ಊರು.

ತಮ್ಮಡಿಹಳ್ಳಿ: ವೀರಶೈವ ಒಂದು ಒಳಗುಂಪಾದ ತಮ್ಮಡಿಗಳು ದೇವಸ್ಥಾನದ ಪೂಜಾದಿಕಾರ್ಯ ನಡೆಸುತ್ತಿದ್ದು ಅವರೆಲ್ಲ ಒಂದೇ ಕಡೆ ನೆಲೆ ಹೂಡಿದ ಸ್ಥಳ.

ನೇಕಾರನಹಳ್ಳಿ: ಕೈಮಗ್ಗಗಳನ್ನು ಇಟ್ಟುಕೊಂಡು ಬಟ್ಟೆಯನ್ನು ನೇಯುವಂಥ ಜನರ ನೆಲೆ.

ಉಪ್ಪಾರಹಳ್ಳಿ: ಉಪ್ಪನ್ನು ತಯಾರಿಸುವ ಕಸುಬನ್ನು ಆಶ್ರಯಿಸಿರುವ ಜನರ ನೆಲೆ.

ಇದೇ ರೀತಿ ಕಣಿಯನಪುರ, ಕೆಲ್ಸಿಪುರ, ಹೂಗಾರನಹಳ್ಳಿ, ಪರಿವಾರಹಳ್ಳಿ, ಸುಣ್ಣಗಾರನಹಳ್ಳಿ, ದೊಂಬರಪುರ, ಸಂಗೀತಪುರ, ಮುಂತಾದ ಕಸುಬುಗಳನ್ನು ಆಶ್ರಯಿಸಿ ನೆಲೆ ನಿಂತ ವಾಸ್ತವ್ಯ ಸೂಚಿಗಳನ್ನು ವಿವರಿಸಬಹುದು.

ಒಟ್ಟಿನಲ್ಲಿ ಹೇಳುವುದಾದರೆ ಸ್ಥಳನಾಮಗಳ ಉಗಮ, ವಿಕಾಸ, ಪ್ರಾಕೃತಿಕ ಮತ್ತು ಸಾಂಸ್ಕೃತಿಕ ಅಂಶಗಳ ಒಳಪದರುಗಳ ರೂಪ ರಚನೆಯಿಂದ ಜನ್ಮತಾಳುತ್ತವೆ. ಇದು ಹೊರನೋಟಕ್ಕೆ ಕ್ಲಿಷ್ಟಕರವಾಗಿ ಕಂಡು ಬಂದರೂ ಅಧ್ಯಯನದ ಒಳಹೊಕ್ಕು ಹೋಗಿ ನೋಡಿದಾಗ ಅದರ ಹುಟ್ಟು ಬೆಳವಣಿಗೆ ಆಶ್ರಯದ ನೆಲೆಗಳ ಗೋಚರವಾಗುತ್ತವೆ. ಅದೇ ರೀತಿ ಸಂಸ್ಕೃತಿ ನಾಗರೀಕತೆಗಳು ಅಭಿವೃದ್ಧಿಯಾದಂತೆ ಸ್ಥಳನಾಮಗಳು ಕೂಡ ಬದಲಾಗುತ್ತಾ ಹೋಗುತ್ತವೆ.

**ಸ್ಥಳನಾಮಗಳ ವರ್ಗೀಕರಣ:**

ಎಷ್ಟು ಮಾನವ ನೆಲೆಗಳಿವೆಯೋ ಅಷ್ಟು ಊರುಗಳಿರುತ್ತವೆ. ಎಷ್ಟು ಊರುಗಳಿರುತ್ತವೆಯೋ ಅಷ್ಟು ಊರ ಹೆಸರುಗಳಿರುತ್ತವೆ. ವೈವಿಧ್ಯಮಯವಾದ ಊರ ಹೆಸರುಗಳಿರುವಂತೆ, ಎಷ್ಟೋ ಹೆಸರುಗಳು ಅನೇಕ ಕಾರಣಗಳಿಂದ ಪುನರಾವರ್ತಿತವಾಗಿರುತ್ತದೆ. ಪುನರಾವರ್ತಿತ ಹೆಸರುಗಳಿಗೆ ಕಾರಣವೆಂದರೆ ಪ್ರತಿರೂಪ ಮತ್ತು ಅನುಕರಣೆಯ ತರ್ಕ ಅದರ ಹಿಂದೆ ಕೆಲಸ ಮಾಡಿರುತ್ತದೆ. ಸ್ಥಳನಾಮದ ಉಗಮ ಮತ್ತು ವಿಕಾಸದ ಹಂತದಲ್ಲಿ ಮಾನವ ಮನೋಧರ್ಮದ ಏಕಸೂತ್ರತೆ ಪ್ರದರ್ಶಿತವಾಗಿರುತ್ತದೆ. ಸೀಮಿತ ಪ್ರದೇಶದ ಎಲ್ಲಾ ಸ್ಥಳನಾಮಗಳನ್ನು ಅಧ್ಯಯನಕ್ಕೊಳಪಡಿಸಿದಾಗ ಸೀಮಿತ ಪರಿಧಿಯೊಳಗೆ ಕೆಲವು ತತ್ವಗಳನ್ನು ಆರೋಪಿಸಿ ಅವುಗಳನ್ನು ಒಂದೊಂದು ವರ್ಗಕ್ಕೆ ಒಳಪಡಿಸಬಹುದಾಗಿದೆ. ಹೀಗೆ ಸ್ಥಳನಾಮಗಳನ್ನು ಹಲವು ವಿಧಗಳಲ್ಲಿ ಗುರುತಿಸುವುದನ್ನೇ ನಾವು ಸ್ಥಳನಾಮಗಳ ವರ್ಗೀಕರಣ ಎನ್ನುತ್ತೇವೆ.

ಪಾಶ್ಚಿಮಾತ್ಯ ವಿದ್ವಾಂಸರೇ ಆಗಿರಲಿ, ಪೌರ್ವಾತ್ಯ ವಿದ್ವಾಂಸರೇ ಆಗಿರಲಿ ತಾವು ಅಧ್ಯಯನ ಮಾಡಿದ ಸ್ಥಳನಾಮಗಳನ್ನು ವರ್ಗೀಕರಿಸುವ ಪ್ರಯತ್ನ ಮಾಡಿದ್ದಾರೆ. ಇಂತಹ ಪ್ರಯತ್ನ ಸ್ಥಳನಾಮ ಅಧ್ಯಯನದ ಒಂದು ಭಾಗವೇ ಆಗಿರುತ್ತದೆ. ಸ್ಥಳನಾಮದ ವರ್ಗೀಕರಣಗಳ ಚಿತ್ರಣವನ್ನು ಇಲ್ಲಿ ದಾಖಲುಗೊಳಿಸಲಾಗಿದೆ.

ಆಂಗ್ಲ ಸ್ಥಳನಾಮಗಳ ನಿಘಂಟುವನ್ನು ಸಿದ್ಧಪಡಿಸುವ ಮೂಲಕ ಲೋಕ ವಿಖ್ಯಾತನಾದ ಇ ಎಕ್ವಾಲ್ ಎಂಬ ವಿದ್ವಾಂಸ ಮಾನವ ನೆಲೆಗಳನ್ನು ಪ್ರಧಾನವಾಗಿ ಮೂರು ಬಗೆಯಲ್ಲಿ ಗುರುತಿಸುತ್ತಾನೆ.–

ಅ) ಬುಡಕಟ್ಟು ಮೂಲದ ಸ್ಥಳನಾಮಗಳು

ಆ) ನೆಲೆಯನ್ನು ನಿರ್ದೇಶಿಸುವ ದ್ವಿತೀಯ ಘಟಕಾಧಾರಿತ ಸ್ಥಳನಾಮಗಳು

ಇ) ಪ್ರಕೃತಿ ವಾಚಕ ಸ್ಥಳನಾಮಗಳು[೩]

ಇದು ಸ್ಥಳನಾಮ ವರ್ಗೀಕರಣದ ಆರಂಭಿಕ ಹಂತವೆಂಬುದು ಗಮನಾರ್ಹ.

ಲ್ಯಾಂಬರ್ಟ್ ಮತ್ತು ಮೇರಿಯೋಪ್ಪೆ ಎಂಬ ವಿದ್ವಾಂಸರು ಸ್ಥಳನಾಮಗಳನ್ನು ಹನ್ನೆರಡು (೧೨) ರೀತಿಯಲ್ಲಿ ವರ್ಗೀಕರಿಸಬಹುದೆಂದು ಹೇಳುತ್ತಾರೆ. ಅವು–

೧)ಚಾರಿತ್ರಿಕ ಸ್ಥಳನಾಮಗಳು

೨)ಪ್ರಾಣಿ ನಾಮಗಳು

೩)ಜನಾಂಗ ನಾಮಗಳು

೪)ಸಸ್ಯ–ಲೋಹನಾಮಗಳು

೫)ಸಾಹಿತ್ಯ ಪ್ರೇರಿತ ನಾಮಗಳು

೬)ಪ್ರಮಾದ ಲಬ್ಧ ನಾಮಗಳು

೭)ಮತೀಯ ಸ್ಥಳನಾಮಗಳು

೮)ವ್ಯಕ್ತಿ ನಾಮಗಳು

೯)ಪುನರಾವರ್ತಿತ ಪುರಾತನ ನಾಮಗಳು

೧೦)ಭಾವನಾಮಗಳು

೧೧)ಸುಖ–ದುಃಖ ಸೂಚಕ ನಾಮಗಳು

೧೨)ಹಾಸ್ಯ ನಾಮಗಳು[೪]

ಹೀಗೆ ಅನೇಕ ಪಾಶ್ಚಿಮಾತ್ಯ ವಿದ್ವಾಂಸರು ಬಗೆ– ಬಗೆಯ ವರ್ಗೀಕರಣವನ್ನು ಹೆಸರಿಸಿದ್ದಾರೆ.

ಸ್ಥಳನಾಮಗಳನ್ನು ಅಧ್ಯಯನ ಮಾಡಿದ ಭಾರತೀಯ ವಿದ್ವಾಂಸರೂ ಪಾಶ್ಚಿಮಾತ್ಯರಂತೆಯೇ ಸ್ಥಳನಾಮಗಳ ವರ್ಗೀಕರಣಗಳತ್ತ ಗಮನಹರಿಸಿದ್ದಾರೆ.

ಭಾಷಾವಿಜ್ಞಾನದಲ್ಲಿ ಬಹುದೊಡ್ಡ ಹೆಸರಾದ ಸುನೀತಕುಮಾರ ಚಟರ್ಜಿ ಯವರು ಸ್ಥಳನಾಮಗಳನ್ನು ಐದು ಬಗೆಯಾಗಿ ವಿಂಗಡಿಸಿದ್ದಾರೆ.

೧)ಜಾತಿ–ಬುಡಕಟ್ಟು ಹೆಸರುಗಳು

೨)ಧಾರ್ಮಿಕ ಸಂಗತಿಯ ಹೆಸರುಗಳು

೩)ಪುರಾತನ ಹೆಸರುಗಳ ಪುನರಾವರ್ತನೆ

೪)ನೈಸರ್ಗಿಕ ಲಕ್ಷಣದ ಹೆಸರುಗಳು

೫)ವ್ಯಕ್ತಿ–ಘಟನೆ ಪ್ರೇರಿತ ಹೆಸರುಗಳು

ಈ ಐದು ವರ್ಗೀಕರಣಕ್ಕೆ ಪುರಾತತ್ವಶಾಸ್ತ್ರದ ಬಹುದೊಡ್ಡ ವಿದ್ವಾಂಸರಾದ ಎಚ್.ಡಿ. ಸಂಕಾಲಿಯಾ ಅವರು ೧) ಸಂಪ್ರದಾಯ ಮೌಢ್ಯದಿಂದ ಪ್ರೇರಿತವಾದ ಸ್ಥಳನಾಮಗಳು, ೨)ಹೂ-ಹಣ್ಣು-ಮರಗಳಿಂದ ಪ್ರೇರಿತವಾದ ಹೆಸರುಗಳು ಎಂಬುದನ್ನು ಸೇರಿಸಿ ಏಳು ಬಗೆಯ ವರ್ಗಗಳನ್ನು ಗುರುತಿಸುತ್ತಾರೆ.

ಹಳೆಯ ತಲೆಮಾರಿನ ಹಿರಿಯ ಸಂಶೋಧಕರೂ ದೊಡ್ಡ ವಿದ್ವಾಂಸರೂ ಆದ ಶಂಬಾ ಜೋಶಿಯವರು ತಮ್ಮ **ಎಡೆಗಳು ಹೇಳುವ ಕಂನಾಡ ಕತೆ**ಯಲ್ಲಿ ಸ್ಥಳನಾಮಗಳನ್ನು ಇಪ್ಪತ್ತೆರಡು ಮೂಲಗಳಿಂದ ಹುಟ್ಟ ಬಹುದೆಂಬುದನ್ನು ಉದಾಹರಣೆಗಳ ಮೂಲಕ ಸಮರ್ಥಿಸುತ್ತಾರೆ. ಅವರು ಹೆಸರಿಸುವ ವರ್ಗಗಳೆಂದರೆ-

"೧)ಪ್ರಾಣಿಗಳಿಂದ
೨)ದೇಹದ ಅಂಗಾಂಗಗಳಿಂದ
೩)ಮನೆಗಳಿಂದ
೪)ಬಣ್ಣಗಳಿಂದ
೫)ಬಂಗಾರದಿಂದ
೬)ಗ್ರಹಣಗಳಿಂದ
೭)ದಿಕ್ಕುಗಳಿಂದ
೮)ಬೇಸಾಯದಿಂದ
೯)ಊರಗಾತ್ರಗಳಿಂದ
೧೦)ದೇವತಾದಿಗಳಿಂದ
೧೧)ವ್ಯವಸಾಯ-ಉದ್ಯೋಗದಿಂದ
೧೨)ಗಿಡಗಂಟಿಗಳಿಂದ
೧೩)ಬಳಗದವರಿಂದ
೧೪)ದಿನಿಸುಗಳಿಂದ
೫)ಹರಳುಗಳಿಂದ
೧೬)ಅಂಕೆಗಳಿಂದ
೧೭)ಮಳೆ-ಮಿಂಚುಗಳಿಂದ
೧೮)ನೆಲಗಳಿಂದ
೧೯)ಕಾಲಗಳಿಂದ
೨೦)ಕೂಡಿಕೆಗಳಿಂದ
೨೧)ಜನಗಳಿಂದ
೨೨)ವ್ಯಕ್ತಿಗಳಿಂದ

ಈ ಪಟ್ಟಿಯು ಉದ್ದವಾಗಿ ಕಂಡರೂ, ಅತಿ ವ್ಯಾಪ್ತಿ ದೋಷದಿಂದ ಮುಕ್ತವಾಗಿ ಬಹುಮಟ್ಟಿಗೆ ವೈಜ್ಞಾನಿಕವಾಗಿದೆಯೆಂದು ಹೇಳಬಹುದು".[೫]

ಸ್ಥಳನಾಮಗಳ ಬಗೆಗೆ ಅಧ್ಯಯನ ಮಾಡಿ ಅವುಗಳಿಗೊಂದು ವೈಜ್ಞಾನಿಕ ಚೌಕಟ್ಟನ್ನು ನಿರ್ಮಿಸಿಕೊಟ್ಟ ಆಧುನಿಕ ವಿದ್ವಾಂಸರಲ್ಲಿ ಡಾ.ರಘುಪತಿಭಟ್ ಕೆಮ್ತೂರ್ ಅವರು ಒಬ್ಬರು. **ತುಳುನಾಡಿನ ಸ್ಥಳನಾಮಗಳು** ಎಂಬ ನಿಬಂಧವನ್ನು ರಚಿಸಿ ಪಿಎಚ್.ಡಿ ಪಡೆದವರು. ಈ ವಿದ್ವಾಂಸರು ಇಡೀ ಸ್ಥಳನಾಮಗಳನ್ನು ಪ್ರಧಾನವಾಗಿ ಎರಡು ಗುಂಪುಗಳಾಗಿ ವಿಂಗಡಿಸುತ್ತಾರೆ.[೬] ಅವರು ಗುರುತಿಸುವ ಪ್ರಧಾನ ಎರಡು ವರ್ಗೀಕರಣಗಳು ಮತ್ತು ಅವುಗಳ ಒಳವಿಭಾಗಗಳು ಕೆಳಕಂಡಂತಿವೆ.

ಅ) ಪ್ರಾಕೃತಿಕ ಸ್ಥಳನಾಮಗಳು

ಜಲವಾಚಿ, ಜಲಸಂಬಂಧಿ ವಾಚಕಗಳು, ಉನ್ನತ ಭೂವಾಚಕಗಳು, ನಿಮ್ನ ಭೂವಾಚಕಗಳು, ಶಿಲಾವಾಚಿಗಳು, ಕ್ಷೇತ್ರವಾಚಕಗಳು (ಗದ್ದೆ, ಹೊಲ ಮತ್ತು ಭೂ ಭಾಗಗಳೂ ಸೇರಿದಂತೆ), ತರಕಾರಿ ಹೆಸರುಗಳು, ಅರಣ್ಯ ಬನ ಪೊದೆ, ಸಸ್ಯವರ್ಗ, ಪ್ರಾಣಿ-ಪಕ್ಷಿವರ್ಗ, ದಿಕ್ಕು-ದೆಸೆಗಳು (ಸ್ಥಳದ ಸನ್ನಿವೇಶ, ಮೇಲೆ-ಕೆಳಗು, ಎಡ-ಬಲ ಸೇರಿದಂತೆ), ವಿಲಕ್ಷಣ ಭೂ ಸ್ಥಿತಿಯಿಂದ ನಿಷ್ಪನ್ನವಾದ ಹೆಸರುಗಳು, ಮಾರ್ಗವಾಚಕಗಳು, ಸಾಪೇಕ್ಷ ಸ್ಥಳನಾಮಗಳು (ಕಾಲ ಸಂಬಂಧಿ, ಗಾತ್ರ ಸಂಬಂಧಿ, ಎತ್ತರ-ತಗ್ಗು ಸಂಖ್ಯಾ ಸಂಬಂಧಿ), ಮಣ್ಣು (ಗುಣ, ಬಣ್ಣ, ತೇವಾಂಶ ಸೇರಿದಂತೆ), ಭೌತ ವಸ್ತು (ಗಾಳಿ, ಬೆಳಕು, ಸೂರ್ಯ, ಚಂದ್ರ, ಆಕಾಶ ಕುರಿತಂತೆ), ಬಣ್ಣ ಈ ರೀತಿಯಲ್ಲಿ ಪ್ರಾಕೃತಿಕ ಸ್ಥಳನಾಮಗಳು ಬಳಕೆಯಾಗಿವೆ.

ಆ)ಸಾಂಸ್ಕೃತಿಕ ಸ್ಥಳನಾಮಗಳು

ವ್ಯಕ್ತಿ ನಾಮಗಳು (ಅಂಕಿತನಾಮ, ಗಂಡು-ಹೆಣ್ಣು, ಸೇರಿದಂತೆ), ಕುಲನಾಮಗಳು (ಜಾತಿವಾಚಕ, ವ್ಯಕ್ತಿವಾಚಕ), ಸಂಬಂಧ ವಾಚಕ, ಜನಾಂಗವಾಚಕ, ದೈವವಾಚಕ, ಪೂಜೆ ಪೂಜಾವಿಧಿ ಪೂಜಾಪರಿಕರ ಇತ್ಯಾದಿ, ವಾಸ್ತವ್ಯ ಸೂಚಕ, ವಸ್ತುವಾಚಕ, ವ್ಯಾಪಾರ-ಉದ್ದಿಮೆ ಇತ್ಯಾದಿ, ಹವ್ಯಾಸ-ಕಲೆ-ಮನರಂಜನೆ, ಚಾರಿತ್ರಿಕ ಹೆಸರುಗಳು (ಮನೆತನ, ಪದವಿ, ಆಡಳಿತ ಕಂದಾಯ).

ದೇ ಜವರೇಗೌಡ ಅವರು 'ಸ್ಥಳನಾಮ ವ್ಯಾಸಂಗ'ದಲ್ಲಿ ಸ್ಥಳನಾಮಗಳನ್ನು ಹತ್ತು ಪ್ರಕಾರವಾಗಿ ವರ್ಗೀಕರಣವನ್ನು ಮಾಡಿದ್ದಾರೆ.-

೧) ವಸತಿ ಸೂಚಿಸುವ ಘಟಕಗಳು

೨) ಬೆಟ್ಟ, ಗುಡ್ಡ, ಕಲ್ಲು, ಸೂಚಕಗಳು

೩) ಜಲಸೂಚಕ ಘಟಕಗಳು

೪) ಭೌಗೋಳಿಕ ಲಕ್ಷಣಗಳು

೫) ಜಾತಿ ಕುಲಧರ್ಮ ಸೂಚಕ

೬) ವ್ಯಾಪಾರ ಕೇಂದ್ರವನ್ನು ಹೇಳುವಂತವು

೭) ಸೈನಿಕರಿಗೆ ಸಂಬಂಧಿಸಿದಂತವು

೮) ಸಸ್ಯವಾಚಿ

೯) ಪ್ರಾಣಿವಾಚಿ

೧೦)ಸಂಕೀರ್ಣ ಘಟಕಗಳು

ಡಾ.ಎಂ.ಎಂ.ಕಲಬುರ್ಗಿ ಯವರು ತಮ್ಮ ನಾಮವಿಜ್ಞಾನದಲ್ಲಿ ಐದು ರೀತಿಯಾಗಿ ಸ್ಥಳನಾಮಗಳನ್ನು ವರ್ಗೀಕರಿಸಿದ್ದಾರೆ, ಅವು-

೧)ನಿಸರ್ಗವಾಚಿ

೨)ನಿರ್ಮಾಣವಾಚಿ

೩)ಜನಾಂಗವಾಚಿ

೪)ವ್ಯಕ್ತಿವಾಚಿ

೫)ಆದರ್ಶವಾಚಿ

ಒಟ್ಟಿನಲ್ಲಿ ಪಾಶ್ಚಿಮಾತ್ಯರ ವರ್ಗೀಕರಣವೇ ಆಗಿರಲಿ ಪೌರ್ವಾತ್ಯರ ವರ್ಗೀಕರಣವೇ ಆಗಿರಲಿ ಅವುಗಳನ್ನು ಗಮನಿಸಿದಾಗ ಒಂದಂಶ ವೇದ್ಯವಾಗುತ್ತದೆ. ಅದೆಂದರೆ ಇದೇ ಅಂತಿಮ

ವರ್ಗೀಕರಣವೆಂಬುದು ಸಾಧ್ಯವಿಲ್ಲ. ಆಯಾ ಪ್ರದೇಶದ ಸಂಸ್ಕೃತಿ, ವೈಶಿಷ್ಟ್ಯತೆಗನುಗುಣವಾಗಿ ಸೇರಿಕೊಳ್ಳಲು ಪ್ರಚಲಿತ ವರ್ಗೀಕರಣ ತೆರೆದ ಮನಸ್ಸನ್ನು ಹೊಂದಿರುವುದೇ ಅದರ ನಮ್ಯತೆಯ ಗುಣವಾಗಿದೆ.

**ಅಡಿಟಿಪ್ಪಣಿ**

೧) ಎಂ. ನಂಜಯ್ಯ ಹೊಂಗನೂರು: 'ಸ್ಥಳನಾಮಗಳು',೨೦೦೯ ಪು. ೦೫
೨) ಅದೇ, ಪು. ೦೬
೩) ದೇ ಜವರೇಗೌಡ: 'ಸ್ಥಳನಾಮ ವ್ಯಾಸಂಗ',೧೯೯೦ ಪು. ೬೫
೪) ಅದೇ, ಪು. ೬೬–೬೮
೫) ಅದೇ, ಪು. ೭೨
೬) ಆರ್ ಕೆ ಮಣಿಪಾಲ: 'ಹೆಸರಿನಲ್ಲೇನಿದೆ',೧೯೮೯ ಪು. ೮೭

# ಅಧ್ಯಾಯ-೦೩

## ಮಹಾರಾಷ್ಟ್ರದಲ್ಲಿ ಕನ್ನಡ ಶಾಸನಗಳು

ಮಹಾರಾಷ್ಟ್ರದಲ್ಲಿ ಉಪಲಬ್ಧವಾದ ಕನ್ನಡ ಶಾಸನಗಳ ಸಂಪಾದನೆ ಹಾಗೂ ಅಧ್ಯಯನಕ್ಕೆ ಸುಮಾರು ಒಂದೂವರೆ ಶತಮಾನದ ಇತಿಹಾಸವಿದೆ. ೧೯೫೬ ರಲ್ಲಿ ಭಾಷಾವಾರು ಪ್ರಾಂತಗಳ ರಚನೆಯಾಯಿತು. ಇಂದಿನ ಕರ್ನಾಟಕ ಮಹಾರಾಷ್ಟ್ರಗಳ ಗಡಿರೇಖೆಗಳು ಕಾಣಿಸಿಕೊಂಡವು. ಅದಕ್ಕೂ ಮುಂಚೆ ಈ ಪ್ರದೇಶವನ್ನು 'ಮುಂಬಯಿ ಪ್ರಾಂತ' ಎಂದೇ ಕರೆಯಲಾಗುತ್ತಿತ್ತು. ಮಹಾರಾಷ್ಟ್ರವಲ್ಲದೆ ಇಂದಿನ ಕರ್ನಾಟಕದ ನಾಲ್ಕು ಜಿಲ್ಲೆಗಳು ಮುಂಬಯಿ ಪ್ರಾಂತದಲ್ಲಿ ಲೀನವಾಗಿದ್ದವು. ಪ್ರಾರಂಭದಲ್ಲಿ ಬ್ರಿಟೀಷ್ ಅಧಿಕಾರಿಗಳೇ ಇಲ್ಲಿನ ಐತಿಹಾಸಿಕ ಅಧ್ಯಯನ ಕುರಿತು ವಿಶೇಷ ಮುತುವರ್ಜಿ ವಹಿಸಿದರು. ಇವರಲ್ಲಿ ನೆನೆಯಬೇಕಾದ ವ್ಯಕ್ತಿ ಗ್ರಹಾಮ್. ಬಳಿಕ ದೇಶಿ ವಿದ್ವಾಂಸರು ಈ ಕಾರ್ಯ ಮುಂದುವರಿಸಿದರು.

ಕನ್ನಡ ನಾಡು ಕಾವೇರಿಯಿಂದ ಗೋದಾವರಿಯವರೆಗೆ ವ್ಯಾಪಿಸಿತ್ತು ಎನ್ನುತ್ತದೆ ಕವಿರಾಜಮಾರ್ಗ. ಈ ಹೇಳಿಕೆಯನ್ನು ಪುಷ್ಟಿಗೊಳಿಸಲು ನಮಗೆ ಸಿಗುವ ಪ್ರಮುಖ ಆಧಾರಗಳೆಂದರೆ ಮಹಾರಾಷ್ಟ್ರದ ಕನ್ನಡ ಶಾಸನಗಳು. ಅಷ್ಟೇ ವಿಶ್ವಾಸನೀಯವಾದ ಇನ್ನೊಂದು ಆಕರವೆಂದರೆ ಶಾಸನಗಳಿಗಿಂತ ಪ್ರಾಚೀನವಾಗಿರುವ ಸ್ಥಳನಾಮಗಳು.

ಮಹಾರಾಷ್ಟ್ರದ ಶಾಸನಗಳ ಚರಿತ್ರೆ ಮೌರ್ಯ ಅಶೋಕನ ಕ್ರಿ.ಪೂ ೩೦೦ ರ ಠಾಣಾ ಜಿಲ್ಲೆಯ ಸೋಪಾರಾ ಪ್ರಾಕೃತ ಶಾಸನದಿಂದ ಪ್ರಾರಂಭವಾಗುತ್ತದೆ. ಆ ಮೇಲೆ ಕ್ರಿ.ಪೂ ೩೦೦ರವರೆಗೆ ಮಹಾರಾಷ್ಟ್ರವನ್ನು ಆಳಿದ ಶಾತವಾಹನರು ಬಹುಶಃ ಹಿಂದೂಗಳಾಗಿದ್ದರೂ ಶಾಸನಗಳ ಭಾಷೆಯ ವಿಷಯವಾಗಿ ಅಶೋಕನ ಧೋರಣೆಯನ್ನೇ ಮುಂದುವರಿಸಿದರು[೧]. ಇದು ಮಹಾರಾಷ್ಟ್ರದ ಶಾಸನಗಳ ಇತಿಹಾಸದಲ್ಲಿ ಮೊದಲನೆಯ ಘಟ್ಟ.

ಶಾತವಾಹನರ ಆಳ್ವಿಕೆಯ ಕೊನೆಯಲ್ಲಿ ಬಾದಾಮಿ ಚಾಲುಕ್ಯರಿಂದಾಗಿ ಮಹಾರಾಷ್ಟ್ರದಲ್ಲಿಯೂ ಬೌದ್ಧ ಸಂಸ್ಕೃತಿ ನಾಶವಾಗಿ ವೈದಿಕ ಸಂಸ್ಕೃತಿ ಬೆಳೆಯಲಾರಂಭಿಸಿ, ಸಹಜವಾಗಿಯೇ ಪ್ರಾಕೃತ ಶಾಸನಗಳು ಹಿಂದೆ ಬಿದ್ದು ಸಂಸ್ಕೃತ ಶಾಸನಗಳು ಬೆಳೆಯಲಾರಂಭಿಸಿದವು. ಈ ಸಮಯದಲ್ಲಿ ಇಂದಿನ ಕರ್ನಾಟಕ- ಮಹಾರಾಷ್ಟ್ರ ಎರಡೂ ರಾಜ್ಯಗಳ ಅಖಂಡ ಅಧಿಕಾರಿಗಳಾಗಿದ್ದ ಈ ಚಾಲುಕ್ಯರು ಕರ್ನಾಟಕದಲ್ಲಿ ಸಂಸ್ಕೃತ ಭಾಷೆಯ ತಾಮ್ರಶಾಸನಗಳ ಜೊತೆಗೆ ಕನ್ನಡ ಭಾಷೆಯ ಶಿಲಾಶಾಸನಗಳನ್ನೂ, ಮಹಾರಾಷ್ಟ್ರದಲ್ಲಿ ಕೇವಲ ಸಂಸ್ಕೃತ ಭಾಷೆಯ ತಾಮ್ರ ಶಾಸನಗಳನ್ನೂ ಬರೆಯಿಸಿದ್ದಾರೆ. ಆಮೇಲೆ ಚಾಲುಕ್ಯರಂತೆ ಎರಡೂ ರಾಜ್ಯಗಳನ್ನಾಳಿದ ಮಾಳಖೇಡ ರಾಷ್ಟ್ರಕೂಟರ ಕಾಲದಲ್ಲಿಯೂ ಚಾಲುಕ್ಯರ ಶಾಸನ ಪದ್ಧತಿಯೇ ಮಹಾರಾಷ್ಟ್ರದಲ್ಲಿ ಮುಂದುವರಿಯಿತು. ಹೀಗಾಗಿ ೧೦ನೆ ಶತಮಾನದವರೆಗೆ

ಇಂದಿನ ಮಹಾರಾಷ್ಟ್ರದಲ್ಲಿ ಅಂದಿನ ಪ್ರಾಂತ ಭಾಷೆಯಾದ ಕನ್ನಡ ಶಾಸನಗಳೂ ಇಲ್ಲ, ಇಂದಿನ ಪ್ರಾಂತಭಾಷೆಯಾದ ಮರಾಠಿ ಶಾಸನಗಳೂ ಇಲ್ಲ. ಇದು ಮಹಾರಾಷ್ಟ್ರದ ಶಾಸನಗಳ ಚರಿತ್ರೆಯಲ್ಲಿ ಎರಡನೆಯ ಘಟ್ಟ.

ಈ ತರುವಾಯ ಉಭಯ ರಾಜ್ಯಗಳ ರಾಜಕೀಯ ಕ್ಷಿತಿಜದ ಮೇಲೆ ಕಲ್ಯಾಣ ಚಾಲುಕ್ಯರು ಕಾಣಿಸಿಕೊಂಡರು. ಇವರ ಮತ್ತು ಇವರ ಮಾಂಡಲೀಕರ ಅವಧಿಯಲ್ಲಿ ವೀರಮೌಲ್ಯ ಮತ್ತು ದೇವಾಲಯ ನಿರ್ಮಾಣ ಕಾರ್ಯ ಮಹಾರಾಷ್ಟ್ರದಲ್ಲಿಯೂ ಮೈಚಾಚಿಕೊಂಡಿತು. ಇದರ ಫಲವಾಗಿ ಈ ಭಾಗದಲ್ಲಿ ಜನಭಾಷೆಯಾದ ಕನ್ನಡದಲ್ಲಿ ಬರೆದ ಸಾರ್ವಜನಿಕ ಮೌಲ್ಯ ಪ್ರಸಾರದ ಮಾಧ್ಯಮಗಳಾದ ಶಿಲಾಶಾಸನಗಳು ಸಾರ್ವಜನಿಕ ಸ್ಥಳಗಳಲ್ಲಿ ನಿಲ್ಲತೊಡಗಿದವು. ಅಶೋಕ ಮತ್ತು ಶಾತವಾಹನರ ಕಾಲದಲ್ಲಿ ಬೆಟ್ಟವಿದ್ದಲ್ಲಿಯೇ ಹೋಗಿ ಶಾಸನ ಕೊರೆಯಿಸುವುದಕ್ಕೂ, ಈಗ ಬೆಟ್ಟದಿಂದ ಶಿಲೆಯನ್ನು ತಂದು ಶಾಸನ ಬರೆದು ಅದನ್ನು ಜನರ ಮಧ್ಯೆ ನಿಲ್ಲಿಸುವುದಕ್ಕೂ ಧೋರಣೆಯಲ್ಲಿ ವ್ಯತ್ಯಾಸವಿರುವುದನ್ನು ಇಲ್ಲಿ ನೆನೆಯಬಹುದು. ಕಲ್ಲು ಇದ್ದಲ್ಲಿಗೆ ಹೋಗಿ ಶಾಸನ ಬರೆಯಿಸುವುದು ಬೇರೆ, ಶಾಸನ ಕಲ್ಲನ್ನು ತಂದು ಜನರ ಮಧ್ಯೆ ನಿಲ್ಲಿಸುವುದು ಬೇರೆ. ಅಂದರೆ ಮೌಲ್ಯಗಳನ್ನು ಶಾಶ್ವತಗೊಳಿಸುವುದು ಬೇರೆ, ಶಾಶ್ವತಗೊಳಿಸುವುದರ ಜೊತೆಗೆ ಪ್ರಸಾರಗೊಳಿಸುವುದು ಬೇರೆ. ಒಂದರದು ಕಾಲಕಾಲದಲ್ಲಿ ಉಳಿಯಬೇಕೆಂಬ ಧೋರಣೆ, ಇನ್ನೊಂದರದು ಜೊತೆಗೆ ದೇಶದೇಶಗಳಲ್ಲಿಯೂ ಬೆಳೆಯಬೇಕೆಂಬ ಧೋರಣೆ. ಹೀಗೆ ಪ್ರಸಾರದ ಮಾಧ್ಯಮವನ್ನು ಪರಿಣಾಮಕಾರಿಗೊಳಿಸುವ ಕ್ರಮ, ಕಲ್ಯಾಣ ಚಾಲುಕ್ಯರ ಕಾಲಕ್ಕೆ ಮಹಾರಾಷ್ಟ್ರದಲ್ಲಿ ಪ್ರಾರಂಭವಾಯಿತು. ಇದರ ಫಲವಾಗಿ ಕನ್ನಡ ಶಾಸನಗಳು ಹುಟ್ಟ ತೊಡಗಿ, ಈಗಿನ ಮಟ್ಟಿಗೆ ಕಲ್ಯಾಣ ಚಾಲುಕ್ಯ ಚಕ್ರವರ್ತಿ ಜಯಸಿಂಹ೨ ೧೦೧೩ ರ ಉಸ್ಮಾನಾಬಾದ್ ಜಿಲ್ಲೆಯ ಒಮಗಾರ ತಾಲ್ಲೂಕಿನ ಮುರಮ್(ಮೊರಂಬ) ಗ್ರಾಮದ ಶಾಸನಕ್ಕೆ 'ಮಹಾರಾಷ್ಟ್ರದ ಪ್ರಥಮ ಕನ್ನಡ ಶಾಸನ'ವೆಂಬ ಗೌರವ ಸಲ್ಲುತ್ತದೆ. ಕರ್ನಾಟಕದಲ್ಲಿ ಈ ಹೊತ್ತಿಗಾಗಲೇ ಸುಮಾರು ೧೦೦೦ ಕನ್ನಡ ಶಾಸನಗಳು ಹುಟ್ಟಿ ಕನ್ನಡ ಶಾಸನಗಳ ಇತಿಹಾಸದಲ್ಲಿ ಒಂದು ಘಟ್ಟ ಮುಗಿದು ಹೋಗಿದ್ದಿತೆಂಬುದನ್ನು ಗಮನಿಸಬೇಕು[೨].

ಕಲ್ಯಾಣ ಚಾಲುಕ್ಯ ಮತ್ತು ಆ ಮೇಲಿನ ಕಲಚುರಿ, ಯಾದವ ಮತ್ತು ಇವರ ಅಧಿಕಾರಿಗಳ ಕಾಲದಲ್ಲಿ ಕರ್ನಾಟಕ- ಮಹಾರಾಷ್ಟ್ರ ಎರಡೂ ಪ್ರಾಂತಗಳಲ್ಲಿಯೂ ಕನ್ನಡ ಶಾಸನಗಳು ವಿಫುಲ ಸಂಖ್ಯೆಯಲ್ಲಿ ಒಮ್ಮೆಲೆ ಹುಟ್ಟಿಕೊಳ್ಳಲಾರಂಭಿಸಿವೆ. ಮಹಾರಾಷ್ಟ್ರದ ಕನ್ನಡ ಶಾಸನಗಳ ಅಧ್ಯಯನವೆಂದರೆ ಈ ಮೂರು ಮನೆತನಗಳ ಅಧ್ಯಯನವೇ ಆಗಿದೆ. ಇವುಗಳಲ್ಲಿ ಕಲ್ಯಾಣ ಚಾಲುಕ್ಯರ ಅದರಲ್ಲಿಯೂ ಆರನೇ ವಿಕ್ರಮಾದಿತ್ಯನ ಶಾಸನಗಳು ಅಧಿಕ ಸಂಖ್ಯೆಯಲ್ಲಿ ಕಂಡು ಬರುತ್ತವೆ. ಇದು ಮಹಾರಾಷ್ಟ್ರ ಶಾಸನಗಳ ಇತಿಹಾಸದಲ್ಲಿ ಮೂರನೆಯ ಘಟ್ಟ, ಕೊನೆಯ ಘಟ್ಟವೂ ಆಗಿದೆ. ಹಾಗೆಯೇ ಮಹಾರಾಷ್ಟ್ರದ ಶಾಸನಗಳ ಸುವರ್ಣಯುಗವೆನಿಸಿದ ಘಟ್ಟವಿದು. ಈ ಹಿರಿಮೆಯನ್ನು ತಂದುಕೊಟ್ಟ ಕೀರ್ತಿ ಇಲ್ಲಿಯ ಕನ್ನಡ ಶಾಸನಗಳಿಗೆ ಸಲ್ಲುತ್ತದೆ.

"ಯಾದವರು ಆಳುವಾಗ ಉಭಯ ಪ್ರಾಂತಗಳಲ್ಲಿ ಈ ಧೋರಣೆ ಮುಂದುವರೆದರೂ ಜೊತೆಗೆ ಮಹಾರಾಷ್ಟ್ರದಲ್ಲಿ ಆಗೊಮ್ಮೆ-ಈಗೊಮ್ಮೆ ಮರಾಠಿ ಶಾಸನಗಳು ಕಾಣತೊಡಗಿದವು. ಈ ಕಾಲದಲ್ಲಿ ಮರಾಠರ ಸಂಖ್ಯೆ ಅಲ್ಲಿ ವರ್ಧಿಸಿದ್ದುದರ, ಅವರು ಪ್ರಬಲವಾಗುತ್ತಿದ್ದುದರ ಲಕ್ಷಣವಿದು. ಮುಂದೆ ಅಲ್ಪಾವಧಿಯಲ್ಲಿಯೇ ಯಾದವರ ಪತನ, ಮುಸಲ್ಮಾನರ ಆಕ್ರಮಗಳು ಘಟಿಸಿ, ೧೪ನೆಯ ಶತಮಾನದ ಪ್ರಾರಂಭದಿಂದ ಮಹಾರಾಷ್ಟ್ರ ಮತ್ತು ಉತ್ತರ ಕರ್ನಾಟಕದಲ್ಲಿ ಒಟ್ಟಾಗಿ ಶಾಸನ ಬರವಣಿಗೆ ಗಣನೀಯ ಪ್ರಮಾಣದಲ್ಲಿ ಕಡಿಮೆಯಾಯಿತು. ಲೇಖನ ಮಾಧ್ಯಮವಾಗಿ ಕಾಗದ ಬಂದು ಈ ಕ್ರಿಯೆಯನ್ನು ಇನ್ನೂ ನಿಧಾನಗೊಳಿಸಿತು. ಮಹಾರಾಷ್ಟ್ರದಲ್ಲಿ ಅದೇ ಆಗ ಸಣ್ಣ ಪ್ರಮಾಣದಲ್ಲಿ ಕಾಣಿಸಿಕೊಳ್ಳಲಾರಂಭಿಸಿದ್ದ ಮರಾಠಿ ಶಾಸನಗಳ ಬರವಣಿಗೆಯೂ ಗಣನೀಯ ಪ್ರಮಾಣದಲ್ಲಿ ಕಡಿಮೆಯಾಗುತ್ತಾ ಬಂದಿತು. ದಕ್ಷಿಣ ಕರ್ನಾಟಕದಲ್ಲಿ ಮಾತ್ರ ವಿಜಯನಗರ ಸಾಮ್ರಾಜ್ಯ ಕಾರಣವಾಗಿ ಕನ್ನಡ ಶಾಸನಗಳ ಬರವಣಿಗೆ ತಕ್ಕ ಪ್ರಮಾಣದಲ್ಲಿ ಕೆಲವು ಕಾಲ ಮುಂದುವರಿಯಿತು[೩] ಎಂದು ಹೇಳುತ್ತಾರೆ.

**ಪ್ರಾಚೀನ ಮಹಾರಾಷ್ಟ್ರ ಶಾಸನಗಳಲ್ಲಿ ಸ್ಥಳನಾಮಗಳು**

ಮಹಾರಾಷ್ಟ್ರ ಕನ್ನಡ ಶಾಸನಗಳೆಂದರೆ ೧೧ ರಿಂದ ೧೩ನೆಯ ಶತಮಾನದವರೆಗಿನ ಗೋದಾವರಿ ದಕ್ಷಿಣದ ಬಯಲು ನಾಡಿನ ಶಾಸನಗಳೇ ಆಗಿವೆ. ಈ ಅವಧಿಯಲ್ಲಿ ಈ ಪ್ರದೇಶದಲ್ಲಿ ಹುಟ್ಟಿ ಈವರೆಗೆ ಶೋಧವಾಗಿರುವ ಕನ್ನಡ ಶಾಸನಗಳ ಸ್ಥೂಲ ವಿವರ ಹೀಗಿದೆ.

೧)ನಾಂದೇಡ ಜಿಲ್ಲೆ-೩೮ ೮)ಪ್ರಿನ್ಸ್ ಆಫ್ ವೇಲ್ಸ್ ಮ್ಯೂಜಿಯಂ-೧೬

೨)ಉಸ್ಮಾನಾಬಾದ್ ಜಿಲ್ಲೆ-೨೪ ೯)ಬರೋಡ ಮ್ಯೂಜಿಯಂ-೦೩

೩)ಸೊಲ್ಲಾಪುರ ಜಿಲ್ಲೆ-೭೦ ೧೦)ಔರಂಗಾಬಾದ್ ಜಿಲ್ಲೆ-೦೩

೪)ಸಾಂಗ್ಲಿ ಜಿಲ್ಲೆ-೫೬ ೧೧)ಅಕೋಲ ಜಿಲ್ಲೆ-೦೬

೫)ಕೊಲ್ಲಾಪುರ ಜಿಲ್ಲೆ-೦೬ ೧೨)ಪರಭಣಿ ಜಿಲ್ಲೆ-೦೧

೬)ಬೀಡ ಜಿಲ್ಲೆ-೦೫ ೧೩)ಠಾಣಾ ಜಿಲ್ಲೆ-೦೧

೭)ಸಾತಾರ ಜಿಲ್ಲೆ-೦೩ ೧೪)ಪೇಸ್ವೆದಫ್ತಪುರ-೦೧

ಓಗೆ ೨೭೦ ಶಾಸನಗಳು ಈವರೆಗೆ ಶೋಧವಾಗಿದ್ದು, ಇವುಗಳಲ್ಲಿ ಸುಮಾರು ೧೭೦ ಶಾಸನಗಳ ಪಾಠ ಪ್ರಕಟವಾಗಿದೆ[೪].

**ಕನ್ನಡ ಶಾಸನಗಳ ಸ್ವರೂಪ**

೧೧ರಿಂದ ೧೩ನೆಯ ಶತಮಾನದ ಕಾಲಾವಧಿ ಕರ್ನಾಟಕದಲ್ಲಿಯ ಕನ್ನಡ ಶಾಸನಗಳ ಇತಿಹಾಸದಲ್ಲಿ ಸುವರ್ಣಯುಗ, ನುಣುಪಾದ ಶಿಲೆ, ಶುದ್ಧ ಭಾಷೆ, ಸಮೃದ್ಧ ಸಾಹಿತ್ಯ ದೃಷ್ಟಿಯಿಂದ ಕನ್ನಡ ಶಾಸನಗಳಿಗೆ ಒಂದು ಸಿದ್ಧರೂಪಕಾಲವಿದು (ಈ ಲಕ್ಷಣ ಮಹಾರಾಷ್ಟ್ರದಲ್ಲಿ ಸಿಗುವ ಕನ್ನಡ ಶಾಸನಗಳಿಗೂ ಅನ್ವಯಿಸುತ್ತದೆ). ಇದರ ವಿವರ ಹೀಗಿದೆ–

೧)ಇವು ನುಣುಪಾದ ಶಿಲೆಯ ಮೇಲೆ ಕೆತ್ತಿದ ಶಾಸನಗಳಾಗಿವೆ.

೨)ಮಹಾರಾಷ್ಟ್ರದ ಶಾಸನ ಸಂಖ್ಯೆ ವರ್ಧಿಸಿದೆ.

೩)ಕನ್ನಡ ಭಾಷೆ ಸಂಸ್ಕೃತ ಪದಗಳಿಂದ ಪ್ರೌಢವಾಗಿದೆ.

೪)ಅಕ್ಷರಗಳು ಆಕರ್ಷಕವಾಗಿದೆ.

೫)ಸಾಹಿತ್ಯ ಚಂಪೂರೂಪದ ಪ್ರೌಢಿಮೆಯಿಂದ ಶೋಭಿಸುತ್ತದೆ.

೬)ಶಾಸನಗಳು ೧೦೦ಸಾಲಿನಷ್ಟು ವಿಸ್ತಾರವಾಗಿವೆ.

**ಕನ್ನಡ ಶಾಸನ ಲಿಪಿ**

ಒಂದೆರೆಡು ಕನ್ನಡ ಶಾಸನಗಳಿಗೆ ಮಾತ್ರ ನಾಗರಲಿಪಿ ಬಳಸಿರುವುದನ್ನು ಬಿಟ್ಟರೆ ಮಹಾರಾಷ್ಟ್ರದಲ್ಲಿ ಸಿಗುವ ಎಲ್ಲಾ ಕನ್ನಡ ಶಾಸನಗಳಿಗೂ ತಪ್ಪದೇ ಕನ್ನಡ ಲಿಪಿಯನ್ನು ಬಳಸಲಾಗಿದೆ. ಇದು ಶಾಸನ ಬರೆಯಿಸಿದ ಗ್ರಾಮಗಳಲ್ಲಿ ಕನ್ನಡ ಭಾಷೆಯನ್ನು ಮಾತನಾಡಬಲ್ಲವರು, ಕನ್ನಡ ಲಿಪಿಯನ್ನು ಬರೆಯಬಲ್ಲವರು, ಹೀಗೆ ಬರೆದುದನ್ನು ಓದ ಬಲ್ಲವರು ಇದ್ದುದನ್ನು ಸ್ಪಷ್ಟಪಡಿಸುತ್ತದೆ. ಇಲ್ಲಿ ಕನ್ನಡ ಭಾಷೆಯನ್ನು ತಾಮ್ರ ಶಾಸನಗಳಿಗಿಂತ ಶಿಲಾ ಶಾಸನಗಳಲ್ಲಿ ಹೆಚ್ಚು ಬಳಸಲಾಗಿದೆ. ಶಿಲಾ ಶಾಸನಗಳು ಸಾರ್ವಜನಿಕ ಮೌಲ್ಯ ಪ್ರಸಾರದ ಮಾಧ್ಯಮಗಳಾಗಿರುವುದರಿಂದ ಆ ಪ್ರದೇಶದ ಸಾರ್ವಜನಿಕರು ಕನ್ನಡವನ್ನೇ ಮಾತೃ ಭಾಷೆಯಾಗಿರಿಸಿಕೊಂಡು ಅದರ ಜೊತೆಗೆ ಸಹಜವಾಗಿಯೇ ಕನ್ನಡ ಲಿಪಿಯನ್ನು ಬಳಸುತ್ತಿದ್ದರೆಂದು ಇದರಿಂದ ವ್ಯಕ್ತವಾಗುತ್ತದೆ. ಇಲ್ಲಿ ಬಳಸಲಾದ ಕನ್ನಡ ಭಾಷೆ–ಲಿಪಿಗೂ ಕರ್ನಾಟಕದಲ್ಲಿ ಬಳಸಲಾದ ಭಾಷೆ ಲಿಪಿಗೂ ಏನೂ ವ್ಯತ್ಯಾಸವಿಲ್ಲವಾದುದರಿಂದ ಮಹಾರಾಷ್ಟ್ರದ ಈ ಭಾಗದ ಜನತೆ ಅಚ್ಚಗನ್ನಡಿಗರೇ ಆಗಿದ್ದರೆಂದು ಹೇಳಲಾಗುತ್ತದೆ.

**ಕನ್ನಡೇತರ ಭಾಷೆ–ಕನ್ನಡ ಲಿಪಿ**

ಮಹಾರಾಷ್ಟ್ರದ ಅನೇಕ ಸಂಸ್ಕೃತ ಮತ್ತು ಮರಾಠಿ ಶಾಸನಗಳಿಗೂ(ಗೋವೆಯ ಖೋಟೆಗ್ರಾಮ ತಾಮ್ರಪಟ(ಶ.ಕ೧೨೭೦)ದಲ್ಲಿ, ಗೋವೆಯ ವೇರ ತಾಮ್ರಪಟ(ಶ.ಕ

೧೨೨೧)ದಲ್ಲಿ ಕನ್ನಡ ಲಿಪಿ ಬಳಸಲಾಗಿದೆ.) ಕನ್ನಡ ಲಿಪಿ ಬಳಸಿದುದು ಕುತೂಹಲದ ವಿಷಯವಾಗಿದೆ. ಲಿಪಿಯನ್ನು ಶ್ರಮವಹಿಸಿ ಕಲಿಯ ಬೇಕಾಗುತ್ತದೆ. ಇದನ್ನು ನೋಡಿದರೆ ಈ ಶಾಸನಗಳಲ್ಲಿದ್ದ ಪ್ರದೇಶದಲ್ಲಿ ಶ್ರಮವಹಿಸಿ ಕನ್ನಡ ಲಿಪಿಯನ್ನು ಕಲಿಯುವುದು ಅವಶ್ಯವಾಗಿರುವಷ್ಟು ಈ ಭಾಷೆ ಅಲ್ಲಿ ಗಾಢವಾಗಿದ್ದಿತೆಂದು ವ್ಯಕ್ತವಾಗುತ್ತದೆ. ಹೀಗಾಗಿ ಜೀವಂತ ಭಾಷೆಯಾಗಿದ್ದ ಮರಾಠಿ ಮತ್ತು ಗತಭಾಷೆಯಾದ ಸಂಸ್ಕೃತಗಳೆರಡಕ್ಕೂ ನಾಗರಿ ಲಿಪಿಗೆ ಬದಲು ಕನ್ನಡ ಲಿಪಿ ಬಳಸುವುದು ಸುಲಭವೆನಿಸುವಂತೆ ಕನ್ನಡ ಲಿಪಿ ಅಲ್ಲಿ ಜೀವಂತವಾಗಿರಬಹುದು. ಹಾಗೆ ನೋಡಿದರೆ ಮಹಾರಾಷ್ಟ್ರದಲ್ಲಿ ಸಿಗುವ ಶಾಸನಗಳಿಗೆ ಕನ್ನಡ ಭಾಷೆಗಿಂತ ಮೊದಲು ಕನ್ನಡ ಲಿಪಿ ಬಳಕೆಯಾಗಿದೆ. ಏಕೆಂದರೆ ಕಲ್ಯಾಣ ಚಾಲುಕ್ಯರಿಗಿಂತ ಮೊದಲಿನ ಅನೇಕ ಸಂಸ್ಕೃತ ಶಾಸನಗಳಿಗೆ ಕನ್ನಡ ಲಿಪಿಯನ್ನು ಬಳಸಿದುದಕ್ಕೆ ಉದಾಹರಣೆಗಳಿವೆ: ತಾಮ್ರಪಟ ಕ್ರಿಶ ೬೫೫ ಸೇಂದ್ರಕ ನಿಕುಂಬಾಲ್ಲಶಕ್ತಿ. ಲಿಪಿ ಸೌಂದರ್ಯವೂ ಒಬ್ಬ ಕನ್ನಡ ಲಿಪಿಕಾರ ಬರೆದಂತೆ ಪ್ರಮಾಣಬದ್ಧ, ಸಹಜ ಸುಂದರವಾಗಿವೆಯೇ ಹೊರತು, ಅನ್ಯ ಭಾಷಿಕನು ಅನುಸರಿಸಿ ಬರೆದಂತಿಲ್ಲ. 'ಈ ಸಾಸನಾಕ್ಷರಮಂ ಬರದು ಪೊಯ್ದುಂ ಧರ್ಮೋರ್ಜಂ' ಎಂಬ ವಾಕ್ಯ ಈ ಶಾಸನ ಪಾಠವನ್ನು ಕಲ್ಲಿನ ಮೇಲೆ ಸುಣ್ಣದಿಂದ ಬರೆದವನೂ ಉಳಿಯಿಂದ ಕೊರೆದವನೂ ಒಬ್ಬ ಸಾಮಾನ್ಯ ಕಲ್ಲುಕುಟಿಗನೆಂದು ತಿಳಿಸುವುದರಿಂದ ಅಲ್ಲಿಯ ಸ್ಥಳೀಯ ಕಲ್ಲುಕುಟಿಗರ ಕೈವರೆಗೂ ಹೋಗಿತ್ತೆಂದು ಹೇಳಬಹುದಾಗಿದೆ[೫].

**ಕನ್ನಡ ಶಾಸನಗಳ ಭಾಷಾ ಸ್ವರೂಪ**

ಮಹಾರಾಷ್ಟ್ರದ ಕನ್ನಡ ಶಾಸನಗಳು ಸಾಮಾನ್ಯವಾಗಿ ಕಲ್ಯಾಣ ಚಾಲುಕ್ಯ, ಕಲಚುರಿ ಮತ್ತು ಸೇವುಣರ ಅವಧಿಯಲ್ಲಿ ಹುಟ್ಟಿದವು. ಈ ಅವಧಿಯಲ್ಲಿ ಕನ್ನಡ ಶಾಸನ ಭಾಷೆ, ವಿಷಯ ವಿನ್ಯಾಸ ದೃಷ್ಟಿಯಿಂದ ಒಂದು ಸಿದ್ಧರೂಪವನ್ನು ಹೊಂದಿದ್ದವು. ಹೀಗಾಗಿ ದೇವತಾಸ್ತುತಿ, ನಗರ, ರಾಜವಂಶ, ದೇವಾಲಯ, ಆಚಾರ್ಯ ಮೊದಲಾದ ವರ್ಣನೆಗಳಲ್ಲಿ ಇಲ್ಲಿಯ ಶಾಸನಗಳು ಹಳಗನ್ನಡ ಭಾಷೆ ಇಲ್ಲಿ ವಿಪುಲ ಪ್ರಮಾಣದಲ್ಲಿ ಕಾಲೂರಿನಿಂತಿದೆ. ಇದಲ್ಲದೆ ಭಾಷೆ ತನ್ನ ಗಾಢ ಪ್ರಸಾರದಿಂದಾಗಿ ವಿಕಲ್ಪರೂಪಗಳಿಂದಲೂ ಬಳಕೆಯಾಗುತ್ತದ್ದುದಕ್ಕೆ ಹೇರು-ಪೇರು, ಹೆಗ್ಗಡೆ-ಪೆರ್ಗಡೆ, ಗಾಮುಂಡ-ಗಾವುಂಡ-ಗೌಣ್ಡ, ನಖರ-ನಗರ, ಪೊಗಳ್ತೆ-ಪೊಗರ್ತೆ, ಕಾಲಂಕಳ್ಚಿ-ಕಾಲಂಕರ್ಚಿ ಇತ್ಯಾದಿ ಪ್ರಯೋಗಗಳು ನಿದರ್ಶನವೆನಿಸಿವೆ. ಶಕಟರೇಫ, ರಳ, ಕುಳಗಳನ್ನು ಸರಿಯಾಗಿಯೇ ಬಳಸಿದುದು ಅಂದು ಮಹಾರಾಷ್ಟ್ರದಲ್ಲಿ ಕನ್ನಡ ಶುದ್ಧ ರೂಪದಲ್ಲಿಯೇ ಬಳಕೆಯಾಗುತ್ತಿದ್ದುದನ್ನು ಸ್ಪಷ್ಟಪಡಿಸುತ್ತದೆ[೬].

ನಿತ್ಯೋಪಯೋಗಿ ಪದಗಳಾದ ಕೆಸರುಕಲ್ಲು, ಕಂಪಣ, ಬಾಡ, ಎಂಟುಹಿಟು, ಆಯಗಾರ, ಗಡಿಂಬಗಳು ಇಲ್ಲಿ ಪದೇ-ಪದೇ ಸಿಗುತ್ತವೆ. ಅಪ್ಪಿತಪ್ಪಿಯೂ ಇಲ್ಲಿಯ ಭಾಷೆಯ ಮೇಲೆ ಮರಾಠಿಯ ಪ್ರಭಾವ ಕಂಡು ಬರುವುದಿಲ್ಲ. ಅಂದರೆ ಇವು ದ್ವಿಭಾಷಾ ಸಂದರ್ಭದಲ್ಲಿ

ಹುಟ್ಟಿದ ಶಾಸನಗಳೆಂದು ಅನಿಸುವುದೇ ಇಲ್ಲ. ಆದುದರಿಂದ ಕನ್ನಡ ಆಗ ಈ ಪ್ರದೇಶದ ಸಾರ್ವಭೌಮ ಭಾಷೆ ಮತ್ತು ಸಾರ್ವತ್ರಿಕ ಭಾಷೆಯಾಗಿತ್ತೆಂದೂ 'ಆ ಗೋದಾವರಿವರಂ ಇರ್ದ ನಾಡು' ಕನ್ನಡ ಭಾಷೆಯಾಗಿದ್ದಿತೆಂದೂ ನಂಬುಗೆ ಹುಟ್ಟುತ್ತದೆ.

## ೩.೧ ಮಹಾರಾಷ್ಟ್ರ ಸ್ಥಳನಾಮಗಳ ಪಟ್ಟಿ

ಶಾಸನಗಳು ಹಳ್ಳಿ-ಹಳ್ಳಿಯಲ್ಲೂ ದೊರೆಯುತ್ತದೆ. ಅವುಗಳ ಸಹಾಯದಿಂದ ಆಯಾ ಪ್ರದೇಶದ ಚರಿತ್ರೆಯನ್ನರಿಯಲು ಸಾಧ್ಯವಾಗುತ್ತದೆ. ಶಾಸನಗಳು ಸಮಕಾಲೀನ ದಾಖಲೆಗಳಾಗಿರುವುದರಿಂದ ಉತ್ಪ್ರೇಕ್ಷೆಗೆ ಅಲ್ಲಿ ಅವಕಾಶವಿಲ್ಲ. ವಸ್ತುನಿಷ್ಠತೆ, ಖಚಿತತೆ ಮತ್ತು ಪ್ರಮಾಣಾರ್ಹತೆ ಅವುಗಳ ಬಹುದೊಡ್ಡ ಗುಣ.

ಪ್ರಾಚೀನ ಮಹಾರಾಷ್ಟ್ರದಲ್ಲಿ ಕನ್ನಡ ಶಾಸನಗಳು ದೊರೆತಿದ್ದು, ಅದರ ವ್ಯಾಪ್ತಿಗೆ ಒಳಪಟ್ಟ ೨೭೦ ಶಾಸನಗಳು ಉಪಲಬ್ಧವಾಗಿವೆ.

ಶಾಸನಗಳ ಸಹಾಯದಿಂದ ಸ್ಥಳನಾಮಗಳ ಪ್ರಾಚ್ಯ ರೂಪಗಳನ್ನು ಗುರುತಿಸಲು ಸಾಧ್ಯವಾಗುವುದಲ್ಲದೆ, ಅವುಗಳು ಕಾಲದಿಂದ ಕಾಲಕ್ಕೆ ಹೊಂದಿರಬಹುದಾದ ರೂಪವ್ಯತ್ಯಾಸ, ಅರ್ಥವ್ಯತ್ಯಾಸಗಳನ್ನರಿಯಲು ಸಾಧ್ಯವಾಗುತ್ತದೆ. ಹಾಗಾಗಿಯೇ ಮಾನವ ನೆಲೆಗಳ ಪ್ರಾಚ್ಯರೂಪಗಳ ಅಧ್ಯಯನ ಶಾಸನೋಕ್ತ ಸ್ಥಳನಾಮಗಳ ಅಧ್ಯಯನಕ್ಕೆ ಯಾವಾಗಲೂ ಪೂರಕ ಎನಿಸುತ್ತದೆ.

"ತಲೆಮಾರು ಬದಲಾದಂತೆಲ್ಲಾ ಅವುಗಳಲ್ಲಿಯ (ಸ್ಥಳನಾಮಗಳ) ಧ್ವನಿ, ರೂಪ, ಭಾಷಾ ಬಳಕೆಯ ವಿಧಾನ ಎಲ್ಲವೂ ಒಂದಲ್ಲಾ ಒಂದು ರೀತಿಯಲ್ಲಿ ಬದಲಾವಣೆಯಾಗುತ್ತಲೇ ಮುಂದುವರಿಯುತ್ತವೆ. ಹೊಸ ಪದಗಳು, ಹೊಸ ಅರ್ಥಗಳು, ಹುಟ್ಟಿಕೊಳ್ಳುತ್ತವೆ. ಇವುಗಳೆಲ್ಲವೂ ಸ್ಥಳನಾಮಗಳಲ್ಲಿ ಜೀರ್ಣವಾಗಿವೆ......ಸಂಶೋಧಕನು ಪ್ರಾಚೀನ ಹಾಗೂ ಪ್ರಾಮಾಣಿಕ ರೂಪವನ್ನು ಹುಡುಕ ಬೇಕಾಗುತ್ತದೆ. ಇಂತಹ ಪ್ರಾಮಾಣಿಕ ರೂಪ ದೊರೆಯುವ ಮುಖ್ಯ ಆಕರಗಳಲ್ಲಿ ಶಾಸನಗಳು ಪ್ರಮುಖವಾಗಿವೆ. ಬಳಕೆಯಾದ ಕಾಲ, ಸಂದರ್ಭ ಮುಂತಾದ ಹೆಚ್ಚಿನ ಮಾಹಿತಿ ದೊರೆಯುವುದರಿಂದ ಅವು ಹೆಚ್ಚಿನ ವಿಶ್ವಾಸನೀಯ ದಾಖಲೆಗಳು ಆಗಿವೆ". ಎಂಬ ಡಾ. ಪಿ. ಗೋಪಾಲಕೃಷ್ಣ ಅವರ ಮಾತು ಅತ್ಯಂತ ಗಮನಾರ್ಹ.(ಸಂಶೋಧನಾ ಪು-೧೪೯).

ಶಾಸನೋಕ್ತ ಸ್ಥಳನಾಮಗಳು ಪ್ರಾಚೀನ ರೂಪಗಳಿಂದ ಪ್ರಾಮಾಣಿಕ ರೂಪಗಳನ್ನು ಪತ್ತೆಹಚ್ಚಲು ಸರಿದಾರಿ ದೊರಕಿದಂತಾಗುತ್ತದೆ. ಜೊತೆಗೆ ಸ್ಥಳನಾಮಗಳು ಕಾಲದಿಂದ ಕಾಲಕ್ಕೆ ಹೊಂದಿರಬಹುದಾದ ರೂಪ, ಧ್ವನಿ ವ್ಯತ್ಯಾಸಗಳ ಒಂದು ಸಾಮಾನ್ಯ ಜಾಯಮಾನವನ್ನರಿಯಲು ಸಾಧ್ಯವಾಗುತ್ತದೆ.

ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೬ರಲ್ಲಿನ ಮಹಾರಾಷ್ಟ್ರ ಶಾಸನೋಕ್ತ ಸ್ಥಳನಾಮಗಳನ್ನು ಆಧಾರವಾಗಿಟ್ಟುಕೊಂಡಿರುವ ಈ ಅಧ್ಯಾಯದಲ್ಲಿ ಅನುಸರಿಸಲಾಗಿರುವ ಕ್ರಮ ಹೀಗಿದೆ-

೧. ಶಾಸನಗಳ ಪೂರ್ಣ ಪಾಠವನ್ನಾಗಲೀ, ವಸ್ತುವನ್ನಾಗಲೀ, ಪ್ರಕಾರವನ್ನಾಗಲೀ ಕೊಡಲಾಗಿಲ್ಲ.
೨. ಶಾಸನಗಳ ಸಂಖ್ಯೆ, ದೊರಕಿದ ಸ್ಥಳ, ರಚಿತವಾದ ಕಾಲ, ಉಲ್ಲೇಖಿತ ಸ್ಥಳನಾಮಗಳು ಪ್ರಮುಖವಾಗಿರುವುದರಿಂದ ಅವುಗಳನ್ನು ದಾಖಲಿಸಲಾಗಿದೆ.

| ಕವಿಹಂ ಶಾ ಸಂ-೬ರ ಶಾಸನ ಸಂಖ್ಯೆ | ಶಾಸನ ದೊರೆತ ಸ್ಥಳ | ಶಾಸನದ ಕಾಲ(ಕ್ರಿಶ) | ಶಾಸನೋಕ್ತ ಸ್ಥಳನಾಮಗಳು |
|---|---|---|---|
| ೩ | ದಾಳಿಂಬ | ೬-೪-೧೧೦೨ | ದಾಳಿಂಬ<br>ಕಲ್ಯಾಣ |
| ೪ | ಮುರಮ್(ಮೊರಂಬ) | ೧೧-೧-೧೦೧೩ | ಕೋರಾವೂರು<br>ಮೊರಂಬ<br>ಹೊಟ್ಟಲಕೆರೆ |
| ೫ | ಮೊರಂಬ | ೧೩-೧೨-೧೦೪೧ | ಕೋರಾವೂರು<br>ಮೊರಂಬ |
| ೬ | ಮೊರಂಬ | ೨೪-೧೨-೧೧೧೮ | ಮೊರಂಬ<br>ಜಯಂತೀಪುರ |
| ೭ | ಔಸಾತಾಲ್ಲೂಕು | ೧೮-೪-೧೧೩೧ | ಜಯಂತೀಪುರ |
| ೮ | ಅಂದೂರು | ೧೬-೧೨-೧೧೦೭ | ಕೆರೆಯೂರು<br>ಕಲ್ಯಾಣ |
| ೯ | ಅಂದೂರು | ೧೧೩೭ | ನಾಮಂದೂರು |

| | | | |
|---|---|---|---|
| ೧೧ | ಇಟ್ಕಲ್ | ೨೬-೧೨-೧೨೧೭ | ಉಪ್ಪರವಟ್ಟಿಖೇಡ<br>ದ್ವಾರಾವತೀಪುರ<br>ಯಿಟ್ಟಗೆ<br>ಲಿಂಗಾಪುರ |
| ೧೨ | ಕೇಸೇಗಾಂವ್ | ೩-೨-೧೧೯೮ | ಉಪ್ಪರವಟ್ಟಿಖೇಡ<br>ದ್ವಾರಾವತೀಪುರ<br>ಸೊನ್ನಲಿಗೆ |
| ೧೩ | ಜಾಮಗಾಂವ್ | ೩೧-೧೨-೧೧೯೫ | ಅಂಕುಲಗೆ<br>ಜಂಬುಗಾವೆ<br>ದ್ವಾರಾವತೀಪುರ<br>ಸೊನ್ನಲಿಗೆ |
| ೧೪ | ನೀಲೆಗಾಂವ್ | ೨೬-೬-೧೧೯೨ | ಉಪ್ಪರವಟ್ಟಿಖೇಡ<br>ದ್ವಾರಾವತೀಪುರ<br>ನೀಲೆಯಗಾಂವ್<br>ವಿಜೆಯಪುರ<br>ಸೊನ್ನಲಿಗೆ |
| ೧೫ | ನಾರಂಗವಾಡಿ | ೨೦-೧೧-೧೧೨೯ | ಕಲ್ಯಾಣ<br>ದೇವಗಿರಿ |
| ೧೬ | ಶಿರೂರ್ ಅನಂತಪಾಲ | ೧೨ನೆಯ ಶತಮಾನ | ಇಳಯಮಠ |
| ೨೩ | ಲಕ್ಷ್ಮೀ ವಿಲಾಸ ಅರಮನೆಯ | ೨೫-೧೨-೧೨೪೦ | ಕೊಲ್ಲಾಪುರ |

| | ವಸ್ತುಸಂಗ್ರಹಾಲಯ | | ದೇವಗಿರಿ |
|---|---|---|---|
| ೨೫ | ಸಿಂಧಿಗೆ ಮಹಾಲಕ್ಷ್ಮೀ ದೇವಾಲಯ | – | ಹೊನ್ನತಿ |
| ೨೬ | ಕವಡೆಳ್ಳಗೊಲ್ಲ | ೨೯–೧೦–೧೧೩೫ | ಕವಡೆಳ್ಳಗೊಳ್ಳ<br>ಕೂಂಡಿಪಟ್ಟಣ<br>ಕೊಲ್ಲಾಪುರ<br>ತರಗಪುರ<br>ಹಾಲಿಯ ಶೆಟ್ಟಿ |
| ೨೮ | ಹೂವಿನಬಾಗೆ | ೨೬–೬–೧೧೩೯ | ಪೂವಿನಬಾಗೆ |
| ೨೯ | ಕ್ಷುಲ್ಲಕಪುರ | ೨೨–೧–೧೧೪೩ | ಕ್ಷುಲ್ಲಕಪುರ<br>ವಳವಾಡ<br>ಹಾವಿನಹೇರಲಿಗೆ |
| ೩೦ | ಕೊಲ್ಲಾಪುರ | ೨೮–೧೦–೧೧೧೫ | ಅಂಕುಲಗೆ<br>ತರಗಪುರ<br>ಬೊಪ್ಪೇವಾಡ<br>ಮಿರಿಂಜೆ<br>ವಳವಾಡ |
| ೩೧ | ಸಿಂಧಿಗೆ | ೧೨ನೆಯ ಶತಮಾನ | ಹೂವಿನಬಾಗೆ |
| ೩೨ | ಬೀಡ್ | ೧೧೪೯ | ವಳವಾಡ |
| ೩೩ | ಕೊಲ್ಲಾಪುರ | ೧೬–೪–೧೧೨೭ | ಹೂವಿನಬಾಗೆ |

| | | | |
|---|---|---|---|
| ೩೬ | ಕೊಲ್ಲಾಪುರ | ೧೦೪೦ | ಕಂಕಣನೂರು<br>ಕೂಂಡಿಪಟ್ಟಣ<br>ವೇಣುಗ್ರಾಮ |
| ೩೭ | ವಡಗಾಂವ್ | ೨-೧-೧೭೭೫ | ಇಂದೀಪುರ |
| ೩೮ | ಕಾಗಲ್ | ೮-೯-೧೧೫೦ | ಖಿಮಢೀಥೆಸ<br>ತರಗಪುರ<br>ವಳವಾಡ |
| ೪೨ | ತೇರ್ಣಿ | ೧೯-೧೨-೧೦೬೨ | ದೇವನೂರು, ಲತ್ತನೂ(ಲೂ)ರು |
| ೪೪ | ಖಿದ್ರಾಪುರ | - | ಕೊಪ್ಪ |
| ೫೮ | ಹೇರಲೆ | ೧೧-೬-೧೧೧೮ | ಕೊಲ್ಲಾಪುರ<br>ವರಂಬನಹರುಲಗೆ |
| ೬೨ | ಏರಿಗೆ | ೨೩-೭-೧೧೩೫ | ಏರಿಗೆ<br>ಚೆಂಡೆಯಗಾವೆ<br>ತಡಗೂರು<br>ಬವರಗಾವೆ<br>ಸಿರಿಮಲಿಗೆ |
| ೬೩ | ಏರಿಗೆ | ೧-೯-೧೧೩೮ | ಉಕ್ಕುಳ(ಲ)ಗಾವೆ<br>ಏರಿಗೆ |
| ೬೪ | ಏರಿಗೆ | ೧೦-೧೨-೧೧೪೯ | ಏರಿಗೆ |

| | | | |
|---|---|---|---|
| ೬೭ | ಕರಾಡಖೇಡ | ೧-೧೨-೧೦೭೯ | ಕರಡಿಕಲ್ಲು<br>ಕಾವಳಿಗಾವೆ<br>ಬಾಯಿಗಾವೆ |
| ೬೮ | ಕರಾಡಖೇಡ | ೬-೧-೧೦೮೮ | ಗಾವುಂಡಗಾವೆ<br>ದೆಯಗಾವೆ<br>ನೇರಲಿಗೆ |
| ೭೦ | – | ೧೯-೩-೧೧೧೩ | ಆಲೂರು |
| ೭೧ | – | – | ಕರಡಿಕಲ್ಲು<br>ಧೋರ |
| ೭೨ | – | ೨೫-೧೨-೧೧೩೦ | ಆಲೂರು<br>ಕಾವಳಿಗಾವೆ<br>ದಯಸವಳಿಗೆ<br>ಬೋರಿಗಾವೆ |
| ೭೩ | – | ೪-೧೦-೧೧೩೦ | ಬೋರಿಗಾವೆ |
| ೭೪ | – | ೨-೮-೧೧೩೩ | ಬಾಯಿಗಾವೆ |
| ೭೭ | ತಡಖೇಲ್ | ೧-೪-೧೦೪೭ | ತಡಕಲ್ಲು |
| ೭೮ | – | ೨೪-೧೨-೧೦೭೦ | ಅಣಲಿಗೆಯೂರು<br>ದೆಯಗಾವೆ<br>ಬಾಯಿಗಾವೆ |
| ೮೦ | ಭೀಮ್ರಾ | ೧೦-೧೨-೧೧೨೨ | ಕಲ್ಲುಕುಂಬರಿಗಾವೆ |

| | | | |
|---|---|---|---|
| ೮೧ | ಹೊಟ್ಟುಲ್ | ೨೪-೧೦-೧೧೨೦ | ಮದನೂರು |
| ೮೫ | ಜುನ್ನಿ | – | ಚೋಳಗಾವೆ<br>ಜುಂನವಳಿಗೆ<br>ವಳಗಾವೆ |
| ೮೬ | ಸಗ್ರೋಳಿ | ೨೫-೧೨-೧೧೧೦ | ಜಯಂತೀಪುರ<br>ಸವರವಳ್ಳಿ |
| ೮೭ | – | ೧೯-೩-೧೧೧೩ | ಕೆಸರುಕಲ್ಲು |
| ೮೯ | – | ೧೦-೧೦-೧೧೧೫ | ಸವರವಳ್ಳಿ |
| ೯೨ | ಎಕ್ಲಾರ | ೨೫-೧೨-೧೦೬೬ | ಅಮರಾವತೀಪುರ<br>ಉಕ್ಕಲಗಾವೆ<br>ಸುಗ್ಗಾವೆ |
| ೯೩ | ನಾರಂಗಲ್ | – | ಅಮರಾವತೀಪುರ |
| ೯೬ | ಸುಗ್ಗಾಂವ್ | ೧೪-೫-೧೦೫೦ | ವೊಕ್ಕಲಗಾವೆ |
| ೯೭ | ಪರಭಣಿ | ೮-೪-೯೬೬ | ಇಳಂದೀಕುಂಟ<br>ಕಟ್ಟಾಕೂರು<br>ಲೆಂಬಳಪಾಟಕ<br>ವನಿಕಟುಪುಲ |
| ೯೮ | ಧರ್ಮಪುರಿ | ೭-೧೧-೧೧೩೯ | ಲಕ್ಕಿಗುಂಡಿ |
| ೯೯ | ಧರ್ಮಪುರಿ | – | ದಿಗ್ಗವಾವಿ<br>ಪೊಟ್ಟಲಕೆರೆ<br>ಬನವಾಸಿ |

| | | | |
|---|---|---|---|
| | | | ಬಳ್ಳಿಗಾವೆ |
| ೧೦೧ | ಸಿಗ್ಗಾವೆ | ೧೦-೧೨-೧೦೬೦ | ಚಂಡಿವಾಡ<br>ಸಿಗ್ಗಾವೆ |
| ೧೦೨ | - | ೨೩-೧-೧೧೩೮ | ಎಲೆಯಪುರ್ವ್ವಳ್ಳಿ<br>ಚೌಗಾವೆ<br>ನವಿಲೂರು<br>ಬನವಾಸಿ |
| ೧೦೩ | - | ೧೨-೧-೧೨೮೨ | ಸೋಗಲ |
| ೧೦೪ | ರಾಯ | ೩೧-೫-೧೦೭೧ | ವಳ್ಳಿಯಪುರ |
| ೧೦೫ | ಹೊನ್ನವಾಡ | ೧೦-೫-೧೦೫೪ | ಅಪ್ಪಯ್ಯಣವೀಡು<br>ಕನ್ನಡಿಗೆ<br>ಪೊನ್ನವಾಡ |
| ೧೦೬ | ಮುದಗಡ | ೧೬-೧೨-೧೧೦೭ | ಮನ್ನೆದಡಿ<br>ಮುದ್ದಗೋಡು |
| ೧೦೯ | ಉಮ್ರಾಣಿ | ೧೨-೨-೧೧೬೫ | ಮಂಗಳಿವಾ(ವೇ)ಡ |
| ೧೧೦ | ಕೊಪಣಪುರ | ೧೩-೩-೧೧೪೨ | ಉಂಬರವಾಣಿ<br>ತೀರ್ಥ |
| ೧೧೩ | ಮೀರಜ್ | ೨೪-೧೨-೧೦೫೮ | ಹಾಡಲಿವಾಡ<br>ಕುಂಟವಾಡ<br>ತರಗಪುರ |

| | | | |
|---|---|---|---|
| ೧೧೪ | ಕೊಲ್ಲಾಪುರ | ೪-೨-೧೧೪೪ | ಜುಗುಳಕೊಪ್ಪ<br>ಸಿರಿಗುಪ್ಪೆ<br>ಸೇಡಂಬಾಳ<br>ಕೊಳನೂರು<br>ದೊಂಗರಿಗಾವೆ<br>ಮಾಳಿ(ಲಿ)ಗೆ |
| ೧೧೫ | ಮಾಡಗಿಹಾಳ | ೨೫-೦೨-೧೧೭೨ | ಲೋಣಾರ<br>ಮಂಗಳಿವಾ(ವೇ)ಡ |
| ೧೧೭ | ಅಕ್ಕಲಕೋಟೆ | ೨೪-೪-೧೧೯೨ | ಚಬ್ಬಣಬಾವಿ<br>ಮಂಗಳಿವಾ(ವೇ)ಡ |
| ೧೧೮ | – | ೧೬-೮-೧೨೧೦ | ಕರಂಜಿಗೆ<br>ಜೇವರಗೆ |
| ೧೧೯ | – | ೧೦-೦೯-೧೧೨೨ | ಚಬ್ಬಣಬಾವಿ<br>ಡಯಿಠಾಣ<br>ದೈಠಾಣ<br>ಪದ್ಮೇಯಮಠ<br>ಸಿಂನಿಖೇಡ<br>ಹೊನ್ನಾಯನಹಳ್ಳಿ |
| ೧೨೦ | – | ೨೫-೭-೧೧೭೯ | ಕಲ್ಲಹಿಪ್ಪರಿಗೆ<br>ನಾಗರಬಾವಿ |
| ೧೨೧ | – | ೧೬-೧೧-೧೨೦೪ | ದುಧನಿಗೆ |
| ೧೨೨ | – | ೨೨-೭-೧೨೧೦ | ಕಾವುಟಗೆ |

| | | | |
|---|---|---|---|
| ೧೨೩ | – | ೧೯-೯-೧೨೧೦ | ಕಮ್ಮರನಾಯಕ<br>ಗುಂಗುರುಗಾವೆ<br>ಚಿಕಕವುಟಗೆ<br>ಚಿಕ ಅಂದವಡಿಗೆ<br>ಚಿಕ್ಕಹಿಳ್ಳೆ |
| ೧೨೪ | ತಡವಾಳ | – | ಸೊನ್ನಲಿಗೆ |
| ೧೨೫ | ಬಾಗೇಹಳ್ಳಿ | ೧೨೧೭ | ಅಂಕುಲಗೆ<br>ಬಾದಾಮಿ<br>ಬಾವುಗೆಹಳ್ಳಿ<br>ಹಿಪ್ಪರಿಗೆ |
| ೧೨೭ | ಧಾರಾಫಲ | ೯-೭-೧೨೧೮ | ಧಾರಾಫಳ<br>ಮಾರುಡಿಗೆ |
| ೧೩೧ | ಮಾರ್ಡಿ | ೧೦-೧-೧೧೦೭ | ಮಾರುಡಿಗೆ |
| ೧೩೩ | ಶಿವಾನಿ | ೧೫-೧೦-೧೧೭೧ | ಸಿವಣಿಗೆ |
| ೧೩೪ | ಸೊಲ್ಲಾಪಉರ | ೨೦-೧-೧೧೩೬ | ಮಂಗಳೂರು<br>ಸೊನ್ನಲಿಗೆ |
| ೧೪೧ | ಕುಂಬಾರಿ | ೧೨-೨-೧೧೬೫ | ಕಲ್ಲುಕುಂಬರಿಗಾವೆ |
| ೧೪೩ | ಗುಂಜಿಗಾವ್ | ೧೨-೧೩ನೇಶತಮಾನ | ಗುಂಜಯಗಾವೆ<br>ಸೊನ್ನಲಿಗೆ |
| ೧೪೪ | – | ೧೩-೧೨-೧೨೩೨ | ಸೊನ್ನಲಿಗೆ |
| ೧೪೮ | ತೀರ್ಥ | ೧೪-೧೦-೧೧೦೬ | ಮೋರಂಡಿ |
| ೧೫೦ | ನಿಂಬರಿಗಿ | – | ಮಂಗಳಿವಾ(ವೇ)ಡ |

| ೧೫೩ | ಭಂಡಾರಕವತೆ | ೧೦೬೯ | ಭಂಡಾರಗೌಡಿಗೆ |
|---|---|---|---|
| ೧೫೫ | ಮಾಲಕವಟೆ | ೧೦-೧೦-೧೧೬೬ | ಮಂದುಬ್ಬೆ<br>ಮಾಳವಿಡಿಗೆ |
| ೧೫೮ | ಮಾಂದ್ರೂಪ | ೩೦-೩-೧೦೬೯ | ಮಂದುಬ್ಬೆ<br>ಸಿಂನೆದಡಿ<br>ಸೂಂಡಿ |
| ೧೫೯ | ಲಂಪಗಿ | ೧೨ನೇಶತಮಾನ | ಲಂಪಗೆ |
| ೧೬೦ | ವಂಗಿ | ೮-೧೨-೧೧೬೨ | ವಂಗಿಗೆ |
| ೧೬೨ | ಸೊಲ್ಲಾಪುರ | ೧೨ನೇಶತಮಾನ | ಅರಸಿಯಬೀಡು<br>ಕಾಡೂರು<br>ತಡಕೋಡು<br>ಬನವಾಸಿ<br>ಮಾಲಂಗೆರೆ<br>ಹುಬ್ಬರವಳ್ಳಿ |
| ೧೬೫ | ಹನುಮಾನ್ ಗಾವ್ | ೧೨ನೇಶತಮಾನ | ಮಂಡಲಗಾವೆ<br>ಸೊನ್ನಲಿಗೆ<br>ಸಿಂಗಡಿಗಾವೆ |
| ೧೬೬ | ಹೊಟಗಿ | ೨೮-೫-೧೨೦೭ | ಹೊಟಗೆ |
| ೧೬೭ | ಪಂಡರಾಪುರ | ೨೮-೧-೧೨೦೦ | ಕುರುವಲಗೆ<br>ದೇಗಾವೆ<br>ಪೂರ್ಣಜೆ<br>ಪೊರಗಾವೆ |

| | | | |
|---|---|---|---|
| | | | ಲಳಿಗೆಯಸೀಮೆ<br>ಹೂಳಜೆ |
| ೧೬೮ | – | ೧೨೯೬ | ಪೂರ್ಣಜೆ |
| ೧೭೪ | ಮಂಗಳಿವೇಡ | ೧೨ನೇ ಶತಮಾನ | ಬಾಗಿವಾಡ |
| ೧೭೬ | ಕಮ್ಮತಗಿ | ೨೮–೧–೧೧೬೪ | ಮಂಗಳಿವಾ(ವೇ)ಡ |

## ೩.೨ ಮಹಾರಾಷ್ಟ್ರ ಸ್ಥಳನಾಮಗಳ ವರ್ಗೀಕರಣ

ಸ್ಥಳನಾಮಶಾಸ್ತ್ರಜ್ಞರು ಸ್ಥಳನಾಮಗಳ ವರ್ಗೀಕರಣವನ್ನು ತಮ್ಮ–ತಮ್ಮ ಭೌಗೋಳಿಕ ಪರಿಸರಗಳಿಗೆ ಅನುಗುಣವಾಗಿ ವಿಂಗಡಿಸಿದ್ದಾರೆ. ಮಹಾರಾಷ್ಟ್ರದಲ್ಲಿನ ಸ್ಥಳನಾಮಗಳನ್ನು ಪ್ರಧಾನವಾಗಿ ಎರಡು ಹಂತಗಳಲ್ಲಿ ವರ್ಗೀಕರಿಸಬಹುದು. ಅವು–

**೧)ಪ್ರಾಕೃತಿಕ ಸ್ಥಳನಾಮಗಳು**

**೨)ಸಾಂಸ್ಕೃತಿಕ ಸ್ಥಳನಾಮಗಳು**

**೧)ಪ್ರಾಕೃತಿಕ ಸ್ಥಳನಾಮಗಳು**

ಪ್ರಕೃತಿ ದತ್ತವಾಗಿ ನಿರ್ಮಿತವಾದ ಬೆಟ್ಟ, ಗುಡ್ಡ, ಮಲೆ, ಕೋಡು, ಕಲ್ಲು, ತಿಟ್ಟು, ಕಾಡು, ದಿಣ್ಣೆ, ಹಳ್ಳ, ಕಂದರ, ನದಿ, ಕಾಲುವೆ, ಗುಂಡಿ, ಕೊಳ, ಕೆರೆ, ಮರ, ಗಿಡ, ಬಳ್ಳಿ, ಪೊದೆಗಳ ಪ್ರತ್ಯಯಗಳು ಸೇರಿ ಸ್ಥಳನಾಮಗಳಾಗುತ್ತವೆ. ಇಂಥವನ್ನು ಪ್ರಾಕೃತಿಕ ಸ್ಥಳನಾಮಗಳೆಂದು ಕರೆಯಬಹುದು. ಈ ಪ್ರಾಕೃತಿಕ ಸ್ಥಳನಾಮಗಳನ್ನು ಮತ್ತೆ ಆರು ಭಾಗಗಳಾಗಿ ವಿಭಾಗಿಸಬಹುದು.

ಅ)ಜಲವಾಚಕ

ಆ)ಸಸ್ಯವಾಚಕ

ಇ)ಪ್ರಾಣಿವಾಚಕ

ಈ)ಶಿಲಾವಾಚಿ

ಉ)ಲೋಹವಾಚಿ

ಊ)ಗಾತ್ರವಾಚಿ

ಅ)ಜಲವಾಚಕ

ಮಾನವನ ಸಂಸ್ಕೃತಿಯ ವಿಕಾಸದ ಹಂತದಲ್ಲಿ ಜಲಕ್ಕೆ ಪ್ರಮುಖ ಸ್ಥಾನವಿದೆ. ಜಗತ್ತಿನ ಬಹುತೇಕ ನಾಗರೀಕತೆಗಳೆಲ್ಲವೂ ನದಿಯ ದಂಡೆಯ ಮೇಲೆ ಆರಂಭವಾಗಿದೆ ಎಂದು ತಿಳಿದು ಬರುತ್ತದೆ. ಸದಾ ಸಂಚಾರಿಯಾಗಿದ್ದ ಆದಿಮಾನವರು ಒಂದು ಕಡೆ ತಮ್ಮ ಅಸ್ತಿತ್ವವನ್ನು ಕಂಡು ಕೊಳ್ಳಲು ಅವರಿಗೆ ಜಲದ ಮೂಲ ಬೇಕಾಗಿತ್ತು. ಈ ತರಹದ ಕಾರಣಗಳಿಂದಾಗಿ ಅಂದಿನ ಮಾನವರು ಕಾಡನ್ನು ತೊರೆದು ನೀರಿನ ಸಮೀಪ ತಮ್ಮ ನೆಲೆಗಳನ್ನು ಕಟ್ಟಿ ಕೊಂಡರು. ಅವು ಅರ್, ಅಲ್, ಅಲ, ಇರ್, ಕಡು, ಕೂಡು, ಗುಂಡಿ, ಬಸೆ, ಮಡವು, ಮೋಳಿಗೆ, ಸಮುದ್ರ, ಹೊಳೆ, ಕೆರೆ, ಕಟ್ಟೆ, ಕಾಲುವೆ, ಬಾವಿ, ಹಳ್ಳ ಮುಂತಾದವು. ಇವು ಸಾಮಾನ್ಯವಾಗಿ ಸ್ಥಳನಾಮಗಳ ಪೂರ್ವ, ಮಧ್ಯ ಮತ್ತು ಅಂತ್ಯ ಪ್ರತ್ಯಯಗಳಾಗಿ ಕಂಡು ಬರುತ್ತವೆ.

ಆಲ್ : ಆಲೂರು

ಏರಿ : ಏರಿಗೆ

ಕಲ್ಯಾಣಿ : ಕಲ್ಯಾಣ

ಕೆರೆ / ಗೆರೆ : ಕೆರೆಯೂರು, ಪೊಟ್ಟಲಕೆರೆ,
ಮಾಲಂಗೆರೆ, ಹೊಟ್ಟಲಕೆರೆ

ಬಾವಿ : ಚಬ್ಬಣಬಾವಿ

ತೀರ್ಥ : ತೀರ್ಥ, ಸೋಮತೀರ್ಥ

ನೀರು : ಮುದಿನೀರು

ಗುಂಡಿ : ಲಕ್ಕಿಗುಂಡಿ

ಆ)ಸಸ್ಯವಾಚಕಗಳು

ಯಾವ ಸ್ಥಳಗಳಲ್ಲಿ ನಿರ್ದಿಷ್ಟ ಜಾತಿಯ ಮರ, ಗಿಡ, ಬಳ್ಳಿ, ಮೆಳೆ, ಬೆಳೆ, ಹುಲ್ಲು, ಸೊಪ್ಪು, ಹೂವು, ಹಣ್ಣು, ಇತ್ಯಾದಿಗಳು ಹೆಚ್ಚಾಗಿ ಬೆಳೆಯುತ್ತವೆಯೋ ಅವಕ್ಕೆ ಅನುಗುಣವಾಗಿ ಸ್ಥಳನಾಮಗಳು ಹುಟ್ಟಿಕೊಂಡಿರುವುದನ್ನು ಕಾಣಬಹುದು.

ಎಲೆ : ಎಲೆಯಪುರ್ವ್ವಳ್ಳಿ

ಉಂಬರ : ಉಂಬರವಾಣಿ

ಕರಂಜಿ : ಕರಂಜಿಗೆ

ಕಾವುಟ : ಕಾವುಟಗೆ

ಗೋವೆ : ಗೋವೆ

ಚಿಂಚ : ಚಿಂಚವಳ್ಳಿ

ಜಂಬು : ಜಂಬುಗಾವೆ

ಜಯಂತಿ : ಜಯಂತೀಪುರ

ಜೇವರ : ಜೇವರಗೆ

ತರಗ : ತರಗಪುರ

ದಾಳಿಂಬ : ದಾಳಿಂಬ

ದಿಂಡ : ದಿಂಡವೂರು

ನೀಲೆ : ನೀಲೆಯಗಾವೆ

**ಇ) ಪ್ರಾಣಿವಾಚಕಗಳು**

ಪ್ರಾಣಿ ಮತ್ತು ಪಕ್ಷಿ ಮೂಲಗಳಿಂದಲೂ ಕೆಲವು ಊರುಗಳಿಗೆ ಹೆಸರು ಬಂದಿವೆ. ಅವು ಸಾಕು ಪ್ರಾಣಿ ಪಕ್ಷಿಗಳಾಗಿರಬಹುದು ಅಥವಾ ಕಾಡು ಪ್ರಾಣಿ ಪಕ್ಷಿಗಳಾಗಿರಬಹುದು.

ಕರಡಿ : ಕರಡಿಕಲ್ಲು

ಕುರಡಿ : ಕುರಡಿಗೆ

ಶಾಲೂ : ತಡವಿಶಾಲೂರು

ನವಿಲು : ನವಿಲೂರು

ಹಾವು : ನಾಗನೂರು, ನಾಗರವಡಿಕೆ, ನಾಗರಬಾವಿ, ನಾಗರಹಾಳ, ನಾಗವಾನಿ, ಹಾವಿನಹೇರಲಿಗೆ

**ಈ)ಶಿಲಾವಾಚಿ**

ಸ್ಥಳನಾಮಗಳು ಬಂಡೆ ಅಥವಾ ಕಲ್ಲಿಗೆ ಸಂಬಂಧಿಸಿದ ಹೆಸರುಗಳನ್ನು ಹೊಂದಿರುತ್ತವೆ.

ಖೇಡ : ಉಪ್ಪರವಟ್ಟಿಖೇಡ

ಕಲ್ಲು : ಕರಡಿಕಲ್ಲು, ಕಲ್ಲಹಿಪ್ಪರಿಗೆ, ಕಲ್ಲುಕುಂಬರಿಗಾವೆ,
ಕೆಸರುಕಲ್ಲು, ತಡಕಲ್ಲು

ಗಿರಿ : ದೇವಗಿರಿ

**ಉ)ಲೋಹವಾಚಿ**

ಸ್ಥಳನಾಮಗಳು ಲೋಹಗಳಿಗೆ ಸಂಬಂಧಿಸಿದ ಹೆಸರುಗಳನ್ನು ಹೊಂದಿರುತ್ತವೆ.

ಹೊನ್ನು : ಪೊನ್ನವಾಡ

ವಂಗ : ವಂಗಿಗೆ

ಚಿನ್ನ : ಸವರವಳ್ಳಿ

**ಊ)ಗಾತ್ರವಾಚಿ**

ಒಂದೇ ಹೆಸರಿನ ಸ್ಥಳನಾಮಗಳು ಒಂದಕ್ಕಿಂತ ಹೆಚ್ಚಿರುವುದರಿಂದ ಅದನ್ನು ಗುರುತಿಸುವ ಸಲುವಾಗಿ ಅದರ ಗಾತ್ರದ ಹಿನ್ನೆಲೆಯಲ್ಲಿ ಹೆಸರಿಸಿರುವುದನ್ನು ಕಾಣಬಹುದು.

ಚಿಕ್ಕ : ಚಿಕ ಕವುಟಗೆ, ಚಿಕ ಅಂದವಡಿಗೆ,
ಚಿಕ್ಕ ಹಿಳ್ಳೆ

ಹಿರಿಯ : ಹಿರಿಯಂದವಡಿಗೆ

**೨)ಸಾಂಸ್ಕೃತಿಕ ಸ್ಥಳನಾಮಗಳು**

ಸ್ಥಳನಾಮ ವರ್ಗೀಕರಣದಲ್ಲಿ ಪ್ರಾಕೃತಿಕ ಅಂಶಗಳನ್ನೊಳಗೊಂಡ ಘಟಕಗಳು ಮೂಲಭೂತವಾಗಿರುತ್ತವೆ. ಆದರೆ ಸಾಂಸ್ಕೃತಿಕ ವಿಭಾಗದಲ್ಲಿ ಐತಿಹಾಸಿಕ ವೀರರು, ರಾಜರು, ದಂಡನಾಯಕರು, ಸೇನಾಧಿಪತಿಗಳು, ಸಾಮಾನ್ಯ ವ್ಯಕ್ತಿಗಳು ತಮ್ಮ ಹೆಸರಿನಲ್ಲಿ ಕೆಲವು ಊರುಗಳನ್ನು ದಾನ, ದತ್ತಿ ಬಳುವಳಿಯಾಗಿ ಕೊಟ್ಟಿರುತ್ತಾರೆ ಹಾಗೂ ವಿವಿಧ ಧರ್ಮ, ಜಾತಿ, ಕುಲಕಸುಬಿನ ಜನರು ಹೆಚ್ಚಾಗಿ ವಾಸಿಸುತ್ತಿದ್ದು ಅವರು ಸಾಂಸ್ಕೃತಿಕವಾದ ಕೊಡುಗೆಗಳನ್ನು ನೀಡಿದ್ದರೆ ಆ ಕಾರಣಗಳಿಂದಲೂ ಸ್ಥಳನಾಮಗಳಿಗೆ ಹೆಸರು ಬಂದಿರುವ ಸಾಧ್ಯತೆ ಇರುತ್ತದೆ.

**ಅ)ವ್ಯಕ್ತಿನಾಮಗಳು**

ಸಾಮಾನ್ಯವಾಗಿ ಕೆಲವು ಊರುಗಳಿಗೆ ವ್ಯಕ್ತಿಯ ಹೆಸರುಗಳು ಬಂದಿರುತ್ತವೆ. ಇವನು ಊರಿನ ಮುಖಂಡ, ಯಜಮಾನ, ಛೇರ್ಮನ್, ಪಟೇಲ, ಶಾನುಭೋಗನಾಗಿರುತ್ತಾನೆ. ಅಲ್ಲಿ ಸರ್ವತೋಮುಖ ಬೆಳವಣಿಗೆಗೆ ಕಾರಣನಾಗಿದ್ದು, ಕಾಲಕ್ರಮೇಣ ಆ ವ್ಯಕ್ತಿಯ ಹೆಸರೇ ಊರ ಹೆಸರುಗಳಾಗಿರುವುದನ್ನು ಕಾಣಬಹುದು.

ಅಪ್ಪಯ್ಯ : ಅಪ್ಪಯ್ಯಣವೀಡು

ಅರಸಿ : ಅರಸಿಯಬೀಡು

ಕಲಿ : ಉಕ್ಕಲಿ

ಎಕ್ಕರುಕ : ಎಕ್ಕರುಕ
ಕೂಳಿ(ಲಿ) : ಕೂಳಿಗೆ
ಗಾವುಂಡ : ಗಾವುಂಡಗಾವೆ
ಜಯಂತೀ : ಜಯಂತೀಪುರ
ಪಾಟಕ : ಲಿಂಬಳಪಾಟಕ
ಸೆಟ್ಟಿ : ಹಾಲಿಯಸೆಟ್ಟಿ
ಹೊನ್ನಾಯ : ಹೊನ್ನಾಯನಹಳ್ಳಿ

**ಆ)ಜಾತಿ ಮತ್ತು ಕಸುಬು ಆಧಾರಿತ ಸ್ಥಳನಾಮಗಳು**

ಒಂದು ಸ್ಥಳದಲ್ಲಿ ಯಾವ ಜಾತಿ ಅಥವಾ ಯಾವ ಕಸುಬು ಹೆಚ್ಚು ಪ್ರಬಲವಾಗಿರುತ್ತದೆಯೋ ಆಯಾ ಜಾತಿ ಅಥವಾ ಕಸುಬಿನ ಹೆಸರೇ ಸ್ಥಳನಾಮಗಳಿಗೆ ಹೆಸರಾಗಿರುವ ಸಾಧ್ಯತೆಗಳಿವೆ.

ಕಮ್ಮಾರ : ಕಮ್ಮಾರನಾಯಕ
ಕೊಲ್ಲ : ಕೊಲ್ಲಾಪುರ
ನಾಗ : ನಾಗನೂರು
ನೀಲ : ನೀಲೆಯಗಾವೆ
ಒಕ್ಕಲಿಗ : ವೊಕ್ಕುಲಗಾವೆ
ಕುಲ : ಉಕ್ಕುಲ

**ಇ)ದೈವ ವಾಚಕಗಳು(ದೈವ ಧರ್ಮ)**

ವಿವಿಧ ಬಗೆಯ ಧರ್ಮಗಳು ಮತ್ತು ಆ ಧರ್ಮದ ಹೆಸರಿನ ಆರಾಧ್ಯ ದೈವಗಳು ನೆಲೆಗೊಂಡಿರುವ ಸ್ಥಳಗಳಿಗೆ ಸಂಬಂಧಿಸಿದ ಸ್ಥಳನಾಮಗಳು ಕಂಡು ಬರುತ್ತವೆ.

ಛತ್ರ : ಅಹಿಚ್ಛತ್ರ
ಮಠ : ಇಳಯಮಠ, ಪದ್ಮೀಯ ಮಠ
ಧರ್ಮ : ಧರ್ಮಪುರ
ದೇವರು : ದೇವಗಿರಿ, ದೇವನೂರು
ಭಂಡಾರ : ಭಂಡಾರ ಗೌಡಿಗೆ
ಮಂಗಳ : ಮಂಗಳಿವಾ(ಡೇ)ಡ
ಲಿಂಗ : ಲಿಂಗಾಪುರ

ಹೂಳಜೆ : ಹೂಳಜೆ

**ಅಡಿಟಿಪ್ಪಣಿಗಳು**

೧)ಎಂ. ಎಂ ಕಲಗುರ್ಗಿ, 'ಮಹಾರಾಷ್ಟ್ರದ ಕನ್ನಡ ಶಾಸನಗಳು', ೧೯೮೭, ಪು. ೧೦

೨)ಅದೇ, ಪು. ೧೧

೩)ಅದೇ, ಪು. ೧೧-೧೨

೪)ಅದೇ, ಪು. ೧೪

೫)ಅದೇ, ಪು. ೧೫-೧೬

೬)ಅದೇ, ಪು. ೧೭

# ಅಧ್ಯಾಯ-೪

## ಮಹಾರಾಷ್ಟ್ರ ಶಾಸನಗಳಲ್ಲಿನ ಸ್ಥಳನಾಮಗಳ ವಿಶ್ಲೇಷಣೆ

೪.೧ ಸ್ಥಳನಾಮಗಳ ನಿಷ್ಪತ್ತಿ ನಿರ್ಣಯ

೪.೨ ಸ್ಥಳನಾಮಗಳ ಭಾಷಿಕ ಅಧ್ಯಯನ

# ಅಧ್ಯಾಯ-೦೪

## ಮಹಾರಾಷ್ಟ್ರ ಶಾಸನಗಳಲ್ಲಿನ ಸ್ಥಳನಾಮಗಳ ವಿಶ್ಲೇಷಣೆ

ಮಹಾರಾಷ್ಟ್ರದಲ್ಲಿ ಕನ್ನಡ ಶಾಸನಗಳು ೧೧ರಿಂದ೧೩ನೆಯ ಶತಮಾನದವರೆಗಿನದ್ದಾಗಿದ್ದು ನಾಂದೇಡ, ಉಸ್ಮಾನಾಬಾದ್, ಬರೋಡ, ಸೊಲ್ಲಾಪುರ, ಔರಂಗಾಬಾದ್, ಸಾಂಗ್ಲಿ, ಅಕೋಲ, ಕೊಲ್ಲಾಪುರ, ಬೀಡ, ಸಾತಾರ, ಪರಭಣಿ, ಠಾಣಾ, ಪೇಶ್ವೆದತ್ತಿಪುರ ಇಲ್ಲಿ ಒಟ್ಟು ೨೭೦ ಶಾಸನಗಳು ದೊರೆತಿದೆ. ಈ ಶಾಸನಗಳಲ್ಲಿ ಸು ೧೮೫ ಸ್ಥಳನಾಮಗಳು ಉಲ್ಲೇಖಗೊಂಡಿದ್ದು, ಅವುಗಳನ್ನು 'ಅ'ಕಾರಾದಿ ಜೊತೆಗೆ ನಿಷ್ಪತ್ತಿ ನಿರ್ಣಯ ಹಾಗೂ ವಾರ್ಗಿಕ ನಿರ್ದಿಷ್ಟಗಳನ್ನಾಗಿ ಗುರ್ತಿಸುವ ಮೂಲಕ ಮಹಾರಾಷ್ಟ್ರದ ಶಾಸನಗಳಲ್ಲಿನ ಸ್ಥಳನಾಮಗಳ ವಿಶ್ಲೇಷಣೆಗೆ ಹೆಚ್ಚು ಪ್ರಾಮುಖ್ಯತೆ ಕೊಡಲಾಗಿದೆ.

### ೪.೧ ಸ್ಥಳನಾಮಗಳ ನಿಷ್ಪತ್ತಿ ನಿರ್ಣಯ

ವ್ಯಕ್ತಿ ಹುಟ್ಟಿದಾಗ ಇಟ್ಟ ಹೆಸರನ್ನೋ ಅಡ್ಡ ಹೆಸರನ್ನೋ ಪಡೆಯುವ ಹಾಗೆ ಒಂದು ಸ್ಥಳಕ್ಕೆ ಕಾಲಿಟ್ಟ ಮಾನವ ಸ್ಥಳಕ್ಕೊಂದು ಹೆಸರು ಕೊಡುವುದು ಸ್ವಾಭಾವಿಕ. ಹಾಗೆ ಇಟ್ಟ ನೆಲೆಯ ಹೆಸರಿಗೂ ಒಂದು ಉಸಿರಿರುತ್ತದೆ. ಆ ಉಸಿರು ಅದರ ಅರ್ಥದಲ್ಲಿರುತ್ತದೆ. ಅಂತಹ ಅರ್ಥವನ್ನು ಹೊರಹೊಮ್ಮಿಸಲು ಇರುವ ಮಾರ್ಗವನ್ನೇ ಸ್ಥಳನಾಮದ ನಿಷ್ಪತ್ತಿ ನಿರ್ಣಯ ಎನ್ನುತ್ತೇವೆ. ಯಾವುದೋ ಕಾಲದಲ್ಲಿ ಯಾವುದೋ ಕಾರಣಕ್ಕಾಗಿ, ಯಾವುದೋ ಅರ್ಥವನ್ನು ಹುದುಗಿಸಿಕೊಂಡಿರುವ ಸ್ಥಳನಾಮದ ನಿಷ್ಪತ್ತಿ ನಡೆಯಬೇಕಾಗಿರಿವುದು ಸಮಕಾಲೀನ ಭಾಷಾ ಮಾನದಂಡಗಳಿಂದ.

ಗ್ರಾಮಗಳ ಅಧ್ಯಯನ ಪ್ರಸಂಗದಲ್ಲಿ ಅದರ ನಿಷ್ಪತ್ತಿ ನಿರ್ಣಯ ಪ್ರಥಮ ಮತ್ತು ಪ್ರಮುಖ ಅಂಶವಾಗಿದೆ. ಅದಿಲ್ಲದೇ ಮಾಡುವ ಅಧ್ಯಯನ ವ್ಯರ್ಥ ಮತ್ತು ನಿಷ್ಪ್ರಯೋಜನಕಾರಿ. ಆದರೆ ನಿಷ್ಪತ್ತಿ ನಿರ್ಣಯ ಅಷ್ಟು ಸುಲಭವಾದುದಲ್ಲ. ಎಂಬ ವಿದ್ವಾಂಸರ ಮಾತು ಗಮನಾರ್ಹವಾದುದು. ನಿಷ್ಪತ್ತಿ ನಿರ್ಣಯದಲ್ಲಿ ಎದುರಿಸಬೇಕಾದ ಸವಾಲಿಗಳನ್ನು ಕಠಿಣ ಮಾರ್ಗವನ್ನು ಅದು ಧ್ವನಿಸುತ್ತದೆ.

ಸ್ಥಳನಾಮಗಳ ನಿಷ್ಪತ್ತಿ ನಿರ್ಣಯದ ಈ ಅಧ್ಯಾಯದಲ್ಲಿ ಅನುಸರಿಸಲಾಗಿರುವ ಕ್ರಮಗಳು ಹೀಗಿವೆ–

೧) ಸ್ಥಳನಾಮ ಶಾಸನೋಕ್ತವಾಗಿದ್ದು, ಅದರ ಶಾಬ್ಧಿಕ ರೂಪದ ಜಾಡನ್ನಾಧರಿಸಿ ನಿಷ್ಪತ್ತಿ ನಿರ್ಣಯ ಮಾಡಲಾಗಿದೆ.

೨) ಒಂದೇ ಸ್ಥಳನಾಮ ಹಲವಾರು ಶಾಸನಗಳಲ್ಲಿ ಹಲವಾರು ರೂಪಗಳಲ್ಲಿ ಉಕ್ತವಾಗಿದ್ದರೆ ಪ್ರಾಚೀನತಮ ರೂಪವನ್ನಾಧರಿಸಿ ನಿಷ್ಪತ್ತಿಗೊಳಿಸಲಾಗಿದೆ.

೩) ಸಾಮಾನ್ಯವಾಗಿ ಸ್ಥಳನಾಮಕ್ಕೆ ಒಂದೇ ನಿಷ್ಪತ್ತಿಯನ್ನು ದಾಖಲಿಸಿದೆಯಾದರೂ ಅನಿವಾರ್ಯವೆನಿಸಿದ ಕಡೆ ಒಂದಕ್ಕಿಂತ ಹೆಚ್ಚು ನಿಷ್ಪತ್ತಿಗಳನ್ನು ಕೊಡಲಾಗಿದೆ.

೪) ಪ್ರತಿರೂಪದ ಕಾರಣಕ್ಕಾಗಿಯೋ, ಅಥವಾ ಅನುಕರಣೆಯ ಕಾರಣಕ್ಕಾಗಿಯೋ ಒಂದೇ ಬಗೆಯ ಸ್ಥಳನಾಮಗಳು ಪುನರಾವರ್ತಿತವಾಗಿರುತ್ತದೆ. ಅಂತಹ ಸಂದರ್ಭದಲ್ಲಿ ಒಂದರ ನಿಷ್ಪತ್ತಿಯನ್ನು ಮಾತ್ರ ದಾಖಲಿಸಲಾಗಿದೆ.

೫) ಸ್ಥಳನಾಮ ಘಟಕಗಳ ಅರ್ಥ, ನಿಷ್ಪತ್ತಿ ಮತ್ತು ನಿರ್ಣಯ ಈ ಮೂರಕ್ಕೆ ಮಾತ್ರ ಆಧ್ಯತೆ ನೀಡಲಾಗಿದೆ.

**ಮಹಾರಾಷ್ಟ್ರ ಸ್ಥಳನಾಮಗಳ 'ಅ'ಕಾರಾದಿ ವಿಶ್ಲೇಷಣೆ ಹಾಗೂ ನಿಷ್ಪತ್ತಿ ನಿರ್ಣಯ :**

ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ–೬ರಲ್ಲಿ ಉಲ್ಲೇಖಗೊಂಡಿರುವ ಶಾಸನಗಳ ಸ್ಥಳನಾಮಗಳನ್ನೇ 'ಅ'ಕಾರಾದಿ ವಿಶ್ಲೇಷಣೆಗೆ ಹಾಗೂ ನಿಷ್ಪತ್ತಿನಿರ್ಣಯ ಮಾಡಲಾಗಿದೆ. ಈ ಸ್ಥಳನಾಮಗಳಿರುವ ಶಾಸನ ದೊರೆತ ಸ್ಥಳ, ಶಾಸನ ಸಂಖ್ಯೆ ಹಾಗೂ ಶಾಸನ ಪ್ರಕಟಿತ ವರ್ಷ ಇವುಗಳನ್ನು ಅಧ್ಯಾಯ ಮೂರರಲ್ಲಿನ ಮಹಾರಾಷ್ಟ್ರ ಸ್ಥಳನಾಮಗಳ ಪಟ್ಟಿಯಲ್ಲಿ ಸೂಚಿಸಲಾಗಿದೆ.

ಅಂಕುಲಗೆ : ಅಂಕುಲ + ಗೆ = ಅಂಕುಲಗೆ
ಅಂಕು = ಸೊಟ್ಟಾಗು, ವಕ್ರವಾಗು
ಗೆ = ವಿಭಕ್ತಿ ಪ್ರತ್ಯಯ

ಊರಿನ ರಚನೆಯು ಸೊಟ್ಟ/ವಕ್ರವಾಗಿದ್ದಿರಬೇಕು ಹಾಗಾಗಿ ಈ ಸ್ಥಳನಾಮ.

ಅಣಲಿಗೆಯೂರು : ಅಣಲ್ + ಇಗೆ + ಊರು = ಅಣಲಿಗೆಯೂರು
ಅಣಲು = ಬಾಯಿಯ ಒಳಬಾಗ, ಅಂಗುಳು, ದವಡೆ ಎಂದರ್ಥ.

ಇಲ್ಲಿನ ವ್ಯಕ್ತಿಯೊಬ್ಬ ಕಲಹದಿಂದಲೋ ಹೋರಾಟದಿಂದಲೋ ತನ್ನ ದವಡೆಗೆ ಪೆಟ್ಟಾಗುವಂತೆ ಮಾಡಿಕೊಂಡಿದ್ದಿರಬೇಕು ಹಾಗಾಗಿ ಈ ಹೆಸರು ಬಳಕೆಯಾಗಿದೆ.

ಅಪ್ಪಯ್ಯಣವೀಡು : ಅಪ್ಪಯ್ಯ + ವೀಡು = ಅಪ್ಪಯ್ಯಣವೀಡು
ಅಪ್ಪಯ್ಯ = ವ್ಯಕ್ತಿಯ ಹೆಸರು
ವೀಡು = ಬೀಡು

ಅಪ್ಪಯ್ಯ ಎಂಬ ವ್ಯಕ್ತಿಯು ಇಲ್ಲಿ ತಂಗಿದ್ದರಿಂದ ಈ ಹೆಸರು ಬಂದಿದೆ.

ಅಮರಾವತಿಪುರ : ಅಮರಾವತಿ + ಪುರ = ಅಮರಾವತಿಪುರ
ಅಮರಾವತಿ = ಇಂದ್ರನಗರ
ಪುರ = ವಾಸ್ತವ್ಯವಾಚಿ ಪದ

ಅರಸಿಯಬೀಡು : ಅರಸಿ + ಬೀಡು = ಅರಸಿಯಬೀಡು
ಅರಸಿ = ರಾಣಿ
ಬೀಡು = ನೆಲೆಸಿದ
ರಾಣಿಯು ಬೀಡು ಬಿಟ್ಟ ಸ್ಥಳ ಎಂಬರ್ಥದಲ್ಲಿ ಈ ಸ್ಥಳನಾಮ

ಇಳಯಮಠ : ಇಳಯ + ಮಠ = ಇಳಯಮಠ
ಇಳಯ = ಸಣ್ಣ, ಚಿಕ್ಕ
ಮಠ = ಸಂನ್ಯಾಸಿ, ಗುರು ಮುಂತಾದವರ ವಾಸಸ್ಥಾನ. ಪಾಠಶಾಲೆ
ಸಣ್ಣ ಮಠವೊಂದು ಇಲ್ಲಿ ಇದ್ದುದರಿಂದ ಈ ಸ್ಥಳನಾಮ.

ಉಂಬರವಾಣಿ : ಉಂಬರ + ವಾಣಿ = ಉಂಬರವಾಣಿ
ಉಂಬರ = ಅತ್ತಿಮರ
ವಾಣಿ = ಮಾತು, ಸರಸ್ವತಿ
ಅತ್ತಿಮರವು ಇಲ್ಲಿ ಹೆಚ್ಚು ಬೆಳೆದಿದ್ದುದರಿಂದ ಈ ಸಸ್ಯವಾಚಿ ಸ್ಥಳನಾಮ.

ಉಕ್ಕಲಿ : ಉನ್ನತ + ಕುಲ = ಉಕ್ಕುಲಿ
ಉಕ್ಕುಲಿ = ಉನ್ನತವಾದ ಕುಲದವನು ಎಂದರ್ಥ

ಉಕ್ಕುಲ(ಳ)ಗಾವೆ : ಉಕ್ಕುಲ + ಗಾವೆ = ಉಕ್ಕುಲಗಾವೆ
ಉಕ್ಕುಲ = ಉತ್ಕೃಷ್ಟವಾದ ಕುಲ
ಗಾವೆ = ಕೆರೆಯಿಂದ ಆವೃತ್ತವಾದ ಗ್ರಾಮ
ಕೆರೆಯಿಂದ ಆವೃತ್ತವಾದ ಪ್ರದೇಶದ ಮಧ್ಯ ಉನ್ನತ ಕುಲದವರು (ಬ್ರಾಹ್ಮಣರು) ಮಾತ್ರ ನೆಲೆಸಿದ್ದಿರಬೇಕು ಹಾಗಾಗಿ ಈ ಸ್ಥಳನಾಮ.

ಉಪ್ಪಯಣದಕುಪ್ಪ : ಉಪ್ಪಯಣ + ಕುಪ್ಪ = ಉಪ್ಪಯಣದಕುಪ್ಪ
ಉಪ್ಪಯಣ = ಪ್ರಯಾಣ ಮಾಡುವಾಗ ತಂಗುವುದು,
ನಡುವೆ ಬೀಡುಬಿಡುವುದು
ಕುಪ್ಪ = ಚಿಕ್ಕಹಳ್ಳಿ
ಪ್ರಯಾಣ ಮಾಡುವಾಗ ತಂಗುವಂತ ಚಿಕ್ಕಹಳ್ಳಿಯಾಗಿತ್ತು ಎಂಬರ್ಥದಲ್ಲಿ ಈ ಸ್ಥಳನಾಮ.

ಉಪ್ಪಿರವಟ್ಟಿಖೇಡ : ಉಪ್ಪಿರ + ಹಟ್ಟಿ + ಖೇಡ = ಉಪ್ಪಿರವಟ್ಟಿಖೇಡ
ಉಪ್ಪಿರ = ಮೇಲುದರ್ಜೆ ಅಥವಾ ಸ್ಥಾನ, ಮೇಲುಮಟ್ಟ
ಹಟ್ಟಿ = ಕೊಟ್ಟಿಗೆ, ಚಿಕ್ಕಹಳ್ಳಿ, ಮನೆಅಂಗಳ

ಖೇಡ = ಎತ್ತರವಾದ ಕೋಟೆಯುಳ್ಳ ಊರು

ಮೇಲು ದರ್ಜೆಯ ಒಂದು ಗುಂಪಿನವರು ಎತ್ತರವಾದ ಕೋಟೆಯುಳ್ಳ ಊರಿನಲ್ಲಿ ವಾಸಿಸುವುದು ಎಂಬರ್ಥದಲ್ಲಿ ಈ ಸ್ಥಳನಾಮ.

ಎಕ್ಕರುಕ : ಎಕ್ಕರುಕ = ಕೀಳ, ತುಚ್ಚವಾದವನು, ನೀಚ

ಕೀಳು ಜನರೆಂದು ಗುರ್ತಿಸಲ್ಪಟ್ಟವರು ವಾಸಿಸುವ ಸ್ಥಳ ಎಂಬರ್ಥದಲ್ಲಿ ಈ ಸ್ಥಳನಾಮ.

ಏರಿಗೆ : ಏರಿ + ಗೆ = ಏರಿಗೆ

ಏರಿ = ಒಂದು ಜಾತಿಯ ಬಾಳೆ ಮೀನು, ಬೆನ್ನು ಮತ್ತು ಹೊಟ್ಟೆಯ ಅಡಿಯಲ್ಲಿ
ಮಾಂಸದ ರೋಮಗಳುಳ್ಳ ಉರುಟು ಮೀನು

ಇಲ್ಲಿ ಬಾಳೆಯ ಮೀನು ಹೆಚ್ಚಾಗಿದ್ದಿದ್ದರಿಂದಾಗಿ ಈ ಸ್ಥಳನಾಮ.

ಕಂಕಣನೂರು : ಕಂಕಣ + ಊರು = ಕಂಕಣನೂರು

ಕಂಕಣ = ಕಡಗ, ಹಸ್ತಾಭರಣ, ಬಳೆ
ಊರು = ವಾಸ್ತವ್ಯ ವಾಚಿ

ಕಮ್ಮರನಾಯಕ : ಕಮ್ಮರ + ನಾಯಕ = ಕಮ್ಮರನಾಯಕ

ಕಮ್ಮಾರ = ಜಾತಿಸೂಚಕ ಪದ,
ನಾಯಕ = ಒಡೆಯ

ಕಮ್ಮಾರ ಜನಾಂಗದ ನಾಯಕ ಎಂಬರ್ಥದಲ್ಲಿ ಈ ವ್ಯಕ್ತಿವಾಚಿ ಸ್ಥಳನಾಮ

ಕರಂಜಿಗೆ : ಕರಂಜಿ + ಗೆ = ಕರಂಜಿಗೆ

ಕರಂಜಿ = ಉಪ್ಪಿನಕಾಯಿ ಹಾಕುವ ಒಂದು ಬಗೆಯ ಹುಳಿಕಾಯಿ,
ಕರಂಡೆಕಾಯಿ

ಕರಂಜಿಗೆ ಹೆಚ್ಚಾಗಿ ಇಲ್ಲಿದ್ದುದ್ದಕ್ಕಾಗಿ ಈ ಸಸ್ಯವಾಚಿ ಸ್ಥಳನಾಮ

ಕರಡಿಕಲ್ಲು : ಕರಡಿ + ಕಲ್ಲು = ಕರಡಿಕಲ್ಲು

ಕರಡಿ = ಮೈತುಂಬ ಉದ್ದವಾದ ಕೂದಲಿರುವ ಒಂದು ಜಾತಿಯ ವನ್ಯಮೃಗ
ಕಲ್ಲು = ಬಂಡೆ, ಶಿಲೆ

ಕರಡಿಯು ಇಲ್ಲಿನ ಕಲ್ಲೊಂದರ ಬಳಿ ವಾಸವಾಗಿದ್ದರಿಂದ ಈ ಸ್ಥಳನಾಮ

ಕರಹಾಟ : ಕರಹಾಟ>ಕರಹಟ>ಕರಹಾಟ>ಕರಾಡ

ಕರಾಡ = ಒಂದು ಪ್ರದೇಶದ ಹೆಸರು

ಕಲ್ಲುಕುಂಬರಿಗಾವೆ : ಕಲ್ಲು + ಕುಂಬರಿ + ಗಾವೆ = ಕಲ್ಲುಕುಂಬರಿಗಾವೆ

ಕಲ್ಲು = ಬಂಡೆ, ಶಿಲೆ

ಕುಂಬ = ಯೋಗಶಾಲೆಯ ಸುತ್ತಲೂ ಕಟ್ಟಿದ ಬೇಲಿ

ಗಾವೆ = ಕೆರೆಯಿಂದ ಆವೃತವಾದ ಗ್ರಾಮ

ಕೆರೆಯಿಂದ ಆವೃತವಾದ ಪ್ರದೇಶದಲ್ಲಿನ ಊರಿನ ಯೋಗಶಾಲೆಯಸುತ್ತಲೂ ಕಲ್ಲಿನಿಂದ ಬೇಲಿ ಕಟ್ಟಿದ್ದರಿಂದ ಈ ಶಿಲಾವಾಚಿಯು ಬಳಕೆಗೆ ಬಂದಿದೆ.

ಕಲ್ಯಾಣ : ಕಲ್ಯಾಣ = ಚೆಲುವಾದ, ಸುಂದರವಾದ, ಮಂಗಳಕರವಾದ, ಸುಖಕರವಾದ ಎಂಬರ್ಥದಲ್ಲಿ ಈ ಸ್ಥಳನಾಮ.

ಕಾಡೂರು : ಕಾಡು + ಊರು = ಕಾಡೂರು

ಕಾಡಿನಿಂದ ಆವೃತವಾದ ಪ್ರದೇಶ ಎಂಬರ್ಥದಲ್ಲಿ ಈ ಸ್ಥಳನಾಮ.

ಕಾವಳಿಗಾವೆ : ಕಾವಳಿ + ಗಾವೆ = ಕಾವಳಿಗಾವೆ

ಕಾವಳಿ = (ಸಂಗೀತ) ಸ್ವರಗಳ ನಾಲ್ಕು ವಿಧಗಳಲ್ಲಿ ಒಂದು

ಗಾವೆ = ಕೆರೆಯಿಂದ ಆವೃತವಾದ ಗ್ರಾಮ

ಕೆರೆಯಿಂದ ಆವೃತವಾದ ಪ್ರದೇಶದಲ್ಲಿ ಕಾವಳಿಯು ಪ್ರಸಿದ್ಧವಾಗಿದ್ದುದರಿಂದ ಈ ಸ್ಥಳನಾಮ.

ಕಾವುಟಗೆ : ಕಾವುಟ + ಗೆ = ಕಾವುಟ

ಕಾವು = ದಂಟು, ನಾಳ, ದೇಟು

ದಂಟು ಇಲ್ಲಿ ಹೆಚ್ಚಾಗಿದ್ದುದರಿಂದ ಈ ಸ್ಥಳನಾಮ.

ಕುಂಟವಾಡ : ಕುಂಟ + ವಾಡ =ಕುಂಟವಾಡ

ಕುಂಟ = ಕಾಲು ಊನವಾದವನು

ವಾಡ = ಬಿಡಾರ

ಕಾಲು ಊನವಾದವನು ಬಿಡಾರದಲ್ಲಿದ್ದುದರಿಂದ ಈ ವ್ಯಕ್ತಿವಾಚಿ ಸ್ಥಳನಾಮ.

ಕುರಡಿಗೆ : ಕುರಡಿ + ಗೆ = ಕುರಡಿಗೆ

ಕುರಡಿ = ಒಂದು ಜಾತಿಯ ಮೀನು

ಕುರಡಿ ಮೀನು ಹೆಚ್ಚು ಇದ್ದುದರಿಂದ ಕುರಡಿಗೆ ಎಂಬ ಈ ಪ್ರಾಣಿವಾಚಿ ಸ್ಥಳನಾಮ.

ಕುರುವಲಗೆ : ಕುರುವಲ + ಗೆ = ಕುರುವಲಗೆ
ಕುರುವಲ = ನೀರಿನಿಂದ ಸುತ್ತುವರೆದ ಪ್ರದೇಶ
ನೀರಿನಿಂದ ಸುತ್ತುವರೆದ ಪ್ರದೇಶದಲ್ಲಿ ಊರಿದ್ದುದರಿಂದ ಈ ಜಲವಾಚಿ ಸ್ಥಳನಾಮ.

ಕೂಳಿಗೆ : ಕೂಳಿಗೆ > ಕೂಳಿಗಾವ್
ಕೂಳಿ + ಗೆ = ಕೂಳಿಗೆ
ಕೂಳಿ = ಕೀಳು ಹೆಂಗಸು, ದುಷ್ಟೆ
ಕೀಳು ಹೆಂಗಸೊಬ್ಬಳು ಅಲ್ಲಿ ಇದ್ದುದರಿಂದ ಈ ವ್ಯಕ್ತಿವಾಚಿ ಸ್ಥಳನಾಮ.

ಕೆರೆಯೂರು : ಕೆರೆ + ಊರು = ಕೆರೆಯೂರು
ಕೆರೆ = ಏರಿ ಹಾಕಿ ನೀರು ನಿಲ್ಲಿಸಿದ ಸ್ಥಳ
ಊರು = ವಾಸಸ್ಥಳ ಸೂಚಿ
ಕೆರೆಯು ಊರಿನಲ್ಲಿ ಪ್ರಸಿದ್ಧವಾಗಿದ್ದರಿಂದ ಈ ಜಲವಾಚಿ ಸ್ಥಳನಾಮ.

ಕೆಸರುಕಲ್ಲು : ಕೆಸರು + ಕಲ್ಲು = ಕೆಸರುಕಲ್ಲು
ಕೆಸರು = ನೀರು ಮತ್ತು ಮಣ್ಣು ಮಿಶ್ರಿತವಾದಂತದ್ದು
ಕಲ್ಲು = ಬಂಡೆ, ಶಿಲೆ
ಕೆಸರು ಕಲ್ಲು ಇದ್ದುದರಿಂದ ಈ ಜಲವಾಚಿ/ಶಿಲಾವಾಚಿ ಸ್ಥಳನಾಮ.

ಕೇಶವಘಳಿಸಾಸ = ಕೇಶವ + ಘಳಿಸಾಸ = ಕೇಶವಘಳಿಸಾಸ
ಕೇಶವ = ಸಮೃದ್ಧವಾದ ಹಾಗೂ ಸುಂದರವಾದ ತಲೆಗೂದಲನ್ನುಳ್ಳ
ಘಳಿಸಾಸ = ಘಟಿಕಾಸ್ಥಾನದ ಅಧಿಕಾರಿ, ಧರ್ಮಶಾಸ್ತ್ರ ಪ್ರವಚನದಲ್ಲಿ ನಿಪುಣನಾದವನು.
ಘಟಿಕಾಸ್ಥಾನದ ಅಧಿಕಾರಿ ಸಮೃದ್ಧವಾದ ತಲೆಗೂದಲನ್ನು ಹೊಂದಿದ್ದಿರಬಹುದು ಹಾಗಾಗಿ ಸ್ಥಳನಾಮ.

ಕೊಟ್ಟಾರ : ಕೊಟ್ಟಾರ = ಕಣಜ, ಧಾನ್ಯಗಾರ, ಉಗ್ರಾಣ, ಭಂಡಾರ
ಭಂಡಾರವು ಇಲ್ಲಿ ವಿಶೇಷವಾಗಿದ್ದುದರಿಂದ ಈ ವ್ಯಕ್ತಿವಾಚಿ ಸ್ಥಳನಾಮ.

ಕೊಪ್ಪ : ಕೊಪ್ಪ = ಚಿಕ್ಕಹಳ್ಳಿ, ಕಾಲೂರು

ಚಿಕ್ಕಹಳ್ಳಿ ಎಂಬರ್ಥದಲ್ಲಿ ಈ ಸ್ಥಳನಾಮ.

ಕೊಲ್ಲಾಪುರ : ಕೊಲ್ಲ + ಪುರ = ಕೊಲ್ಲಾಪುರ
ಕೊಲ್ಲ = ಕಮ್ಮಾರ
ಪುರ = ವಾಸ್ತವ್ಯವಾಚಿ ಪದ
ಕಮ್ಮಾರರು ಹೆಚ್ಚಾಗಿ ವಾಸವಾಗಿದ್ದುದರಿಂದ ಈ ಸ್ಥಳನಾಮ.

ಕೋರಾವೂರು : ಕೋರ + ಊರು = ಕೋರಾವೂರು
ಕೋರ = ಹೊಚ್ಚ ಹೊಸದಾದ, ಹಾಗತಾನೆ ತಯಾರಿಸಿದ
ಊರು = ವಾಸ್ತವ್ಯವಾಚಿ ಪದ
ಹೊಚ್ಚ ಹೊಸತಾದ ವಾಸಸ್ಥಳ ಎಂಬರ್ಥದಲ್ಲಿ ಈ ಸ್ಥಳನಾಮ.

ಕ್ಷುಲ್ಲಕಪುರ : ಕ್ಷುಲ್ಲಕ + ಪುರ = ಕ್ಷುಲ್ಲಕಪುರ
ಕ್ಷುಲ್ಲಕ = ಚಿಕ್ಕದಾದ, ಕಿರಿಯ, ಸಣ್ಣ
ಪುರ = ವಾಸ್ತವ್ಯವಾಚಿ ಪದ
ಚಿಕ್ಕದಾದ ವಾಸ್ತವ್ಯ ಸ್ಥಳವಾಗಿದ್ದಿತು ಎಂಬರ್ಥದಲ್ಲಿ ಈ ಸ್ಥಳನಾಮ.

ಗಾವುಂಡಗಾವೆ : ಗಾವುಂಡ + ಗಾವೆ = ಗಾವುಂಡಗಾವೆ
ಗಾವುಂಡ>ಗೌಡ, ಗುಡ, ಗೋವುಂಡ
ಗಾವುಂಡ = ಊರಿನ ಮುಖ್ಯಸ್ಥ
ಗಾವೆ = ಕೆರೆಯಿಂದ ಆವೃತವಾದ ಗ್ರಾಮ
ಕೆರೆಯಿಂದ ಆವೃತವಾದ ಪ್ರದೇಶದ ಊರಿನಲ್ಲಿ ಮುಖ್ಯಸ್ಥನು ಪ್ರಸಿದ್ಧಿಯಾಗಿದ್ದಿರಬೇಕು ಹಾಗಾಗಿ ಈ ಸ್ಥಳನಾಮ.

ಗುಂಗುರುಗಾವೆ : ಗುಂಗುರು + ಗಾವೆ = ಗುಂಗುರುಗಾವೆ
ಗುಂಗುರು = ಸುರುಳಿಯಾದ, ಕೊಂಕಾದ, ವಕ್ರವಾದ
ಗಾವೆ = ಕೆರೆಯಿಂದ ಆವೃತವಾದ ಗ್ರಾಮ
ಕೆರೆಯಿಂದ ಆವೃತವಾದ ಪ್ರದೇಶವು ಕಂಕಾಗಿದ್ದಿತು ಎಂಬರ್ಥದಲ್ಲಿ ಈ ಸ್ಥಳನಾಮ.

ಗುಂಜಯಗಾವೆ : ಗುಂಜ + ಗಾವೆ = ಗುಂಜಯಗಾವೆ
ಗುಂಜ = ಭಂಡಾರ, ಆಶ್ರಯ, ಗಣಿ

ಗಾವೆ = ಕೆರೆಯಿಂದ ಆವೃತವಾದ ಗ್ರಾಮ

ಕೆರೆಯಿಂದ ಆವೃತವಾದ ಪ್ರದೇಶದಲ್ಲಿ ಆಶ್ರಯ ತಾಣವಾದ್ದರಿಂದ ಈ ಸ್ಥಳನಾಮ.

ಗೋವೆ : ಗೋವೆ > ಗೋವಾ

ಗೋವೆ = ಗೋಡಂಬಿ, ಗೇರು

ಗೋಡಂಬಿ, ಗೇರು ಹಣ್ಣುಗಳು ಹೆಚ್ಚಾಗಿದ್ದುದರಿಂದ ಈ ಸಸ್ಯವಾಚಿ ಸ್ಥಳನಾಮ.

ಚೆಂಡೆಯಗಾವೆ : ಚೆಂಡೆ + ಗಾವೆ = ಚೆಂಡೆಯಗಾವೆ

ಚೆಂಡೆ = ಒಂದು ಬಗೆಯ ಗಂಧ ದ್ರವ್ಯ

ಗಾವೆ = ಕೆರೆಯಿಂದ ಆವೃತವಾದ ಗ್ರಾಮ

ಗಂಧ ದ್ರವ್ಯವು ಪ್ರಸಿದ್ಧವಾಗಿದ್ದುದರಿಂದ ಈ ಸ್ಥಳನಾಮ.

ಚೋಳಗಾವೆ : ಚೋಳ + ಗಾವೆ = ಚೋಳಗಾವೆ

ಚೋಳ = ದೆವ್ವ, ಬೇತಾಳ

ದೆವ್ವ ಬೇತಾಳವು ಈ ಪ್ರದೇಶದಲ್ಲಿದ್ದುದರಿಂದ ಈ ಸ್ಥಳನಾಮ.

ಚೌಗಾವೆ : ಚೌ + ಗಾವೆ = ಚೌಗಾವೆ

ಚೌ = ನಾಲ್ಕು ಗ್ರಾಮಗಳ ಕೂಟ, ಸಮುದಾಯ

ಗಾವೆ = ಕೆರೆಯಿಂದ ಆವೃತವಾದ ಗ್ರಾಮ

ನಾಲ್ಕು ಗ್ರಾಮಗಳ ಕೂಟವಾಗಿದ್ದು ಸುತ್ತಲೂ ಕೆರೆಯಿಂದ ಆವೃತವಾಗಿದ್ದಿತು ಎಂಬರ್ಥದಲ್ಲಿ ಈ ಸ್ಥಳನಾಮ.

ಜಂಬುಗಾವೆ : ಜಂಬು + ಗಾವೆ = ಜಂಬುಗಾವೆ

ಜಂಬು = ಒಂದು ಬಗೆಯ ಜವುಗು ಸಸ್ಯ

ಕೆರೆಯಿಂದ ಆವೃತವಾದ ಪ್ರದೇಶವಾಗಿದ್ದು ಅಲ್ಲಿ ಒಂದು ಬಗೆಯ ಜವುಗು ಸಸ್ಯ ಹೆಚ್ಚಿದ್ದಿತು ಎಂಬರ್ಥದಲ್ಲಿ ಈ ಸಸ್ಯವಾಚಿ ಸ್ಥಳನಾಮ.

ಜಯಂತೀಪುರ : ಜಯಂತಿ + ಪುರ = ಜಯಂತೀಪುರ

ಜಯಂತಿ = ಒಂದು ಬಗೆಯ ಗಿಡ, ನೇತ್ರಮೂಲಿ

ಪುರ = ವಾಸ್ತವ್ಯವಾಚಿ ಪದ

ನೇತ್ರಮೂಲಿ ಒಂದು ಬಗೆಯ ಗಿಡವು ಅಲ್ಲಿ ಹೆಚ್ಚಿದ್ದಿದ್ದರಿಂದ ಈ ಸ್ಥಳನಾಮ.

ಜೀವರಗೆ : ಜೀವರೆಗೆ = ಸತ್ತವರನ್ನು ಬದುಕಿಸುವುದೆಂದು ಹೇಳಲಾಗುವ ಒಂದು ಬಗೆಯ ಸಸ್ಯ,

ಸಂಜೀವಿನಿ.

ಸಂಜೀವಿನಿ ಸಸ್ಯ ಇಲ್ಲಿ ದೊರೆಯುತ್ತಿದ್ದುರಿಂದ ಈ ಸ್ಥಳನಾಮ.

ತಗರಪುರ : ತಗರ + ಪುರ + ತಗರಪುರ

ತಗರ = ಸುವಾಸನೆಯಾದ ಬಿಳಿಯ ಹೂಗಳನ್ನು ಬಿಡುವ ಒಂದು ಬಗೆಯ ಗಿಡ,

ನಂದಿಬಟ್ಟಲು, ನಂದಿವರ್ಧನ

ಪುರ = ವಾಸ್ತವ್ಯವಾಚಿ ಪದ

ಸುವಾಸನೆಯುಕ್ತವಾದ ಬಿಳಿಯ ಹೂಗಳನ್ನು ಬಿಡುವ ಒಂದು ಬಗೆಯ ಗಿಡ ಎಂಬರ್ಥದಲ್ಲಿ ಈ ಸಸ್ಯವಾಚಿ ಸ್ಥಳನಾಮ.

ತಡಕಲ್ಲು : ತಡ + ಕಲ್ಲು = ತಡಕಲ್ಲು

ತಡ = ತಡಿ, ದಂಡೆ, ಅಂಚು

ಕಲ್ಲು = ಬಂಡೆ, ಶಿಲೆ

ಕಲ್ಲು ಗುಡ್ಡದ ಕೊನೆಯಲ್ಲಿ ಊರಿದ್ದುದರಿಂದ ಈ ಶಿಲಾವಾಚಿ ಸ್ಥಳನಾಮ.

ತಡಗೂರು : ತಡಗ + ಊರು = ತಡಗೂರು

ತಡಗ = ಗಂಟು, ಮೂಟೆ

ಊರು = ವಾಸಸ್ಥಳವನ್ನು ಸೂಚಿಸುತ್ತದೆ

ಕಲ್ಲು ಗುಡ್ಡದ ಬದಿಯಲ್ಲಿ ಊರಿದ್ದುದಕ್ಕಾಗಿ ಈ ಶಿಲಾವಾಚಿ ಸ್ಥಳನಾಮ.

ತೀರ್ಥ : ತೀರ್ಥ = ಪವಿತ್ರವಾದ ಜಲ, ನೀರು

ಪವಿತ್ರವಾದ ಜಲ ಎನಿಸಿಕೊಂಡ ನೀರಿದ್ದಿರಬೇಕು ಎಂಬರ್ಥದಲ್ಲಿ ಈ ಜಲವಾಚಿ ಸ್ಥಳನಾಮ.

ದರಿಯೂರು : ದರಿ + ಊರು = ದರಿಯೂರು

ದರಿ = ಆಳವಾದ ಕಮ್ಮರಿ,ಕುದುರೆ,ಕೊಳ್ಳ

ಊರು = ವಾಸ್ತಸ್ಥಳ ಸೂಚಿ

ಜನವಾಸಿಸುವ ಸ್ಥಳದಲ್ಲಿ ಆಳವಾದ ಕಮ್ಮರಿ ಅಥವಾ ಕಂದರವಿತ್ತು ಎಂಬರ್ಥದಲ್ಲಿ ಈ ಸ್ಥಳನಾಮ

ದಾಳಿಂಬ: ಡಾಡಿಮ > ಡಾಳಿಂಬ > ಡಾಳಿಂಬ್ರ > ಡಾಳಿಮ > ದಾಳಿಂಬರ > ದಾಳಿಂಬರಿ >

ದಾಳಿಂಬೆ

ದಾಳಿಂಬೆ=ಒಂದು ಬಗೆಯ ಮರ ಮತ್ತು ಅದರ ಹಣ್ಣು

ದಾಳಿಂಬೆ ಹಣ್ಣು ಹೆಚ್ಚಾಗಿದ್ದುದರಿಂದ ಈ ಸಸ್ಯವಾಚಿ ಸ್ಥಳನಾಮ

ದ್ವಾರಾವತೀಪುರ : ದ್ವಾರಾವತೀ + ಪುರ

ದ್ವಾರಾವತೀ = ಒಂದು ಸ್ಥಳದ ಹೆಸರು

ದಿಂಡವೂರು : ದಿಂಡ + ಊರು = ದಿಂಡವೂರು

ದಿಂಡ = ಒಂದು ಬಗೆಯ ಹೂವಿನ ಬಳ್ಳಿ

ಊರು = ವಾಸಸ್ಥಳ ಸೂಚಿ

ಒಂದು ಬಗೆಯ ಹೂವಿನ ಬಳ್ಳಿ ಬೆಳೆಯುತ್ತಿದ್ದುದರಿಂದ ಈ ಸಸ್ಯವಾಚಿ ಸ್ಥಳನಾಮ

ದೇವಗಿರಿ : ದೇವ + ಗಿರಿ =ದೇವಗಿರಿ

ದೇವ = ದೇವಲೋಕಕ್ಕೆ ಸೇರಿದ

ಗಿರಿ = ಬೆಟ್ಟ, ಗುಡ್ಡ

ಬೆಟ್ಟ ಅಥವಾ ಗುಡ್ಡದಲ್ಲಿ ದೇವಸ್ಥಾನ ಒಂದು ಇದ್ದಿರಬೇಕು ಎಂಬರ್ಥದಲ್ಲಿ ಈ ನಿಸರ್ಗವಾಚಿ ಸ್ಥಳನಾಮ

ದೇವನೂರು : ದೇವನ + ಊರು = ದೇವನೂರು

ದೇವನ = ದೇವರಿಗೆ ಸಂಬಂಧಿಸಿದ್ದು

ಊರು = ವಾಸಸ್ಥಳ ಸೂಚಿ

ದೇವರು ಈ ಸ್ಥಳದಲ್ಲಿ ಇತ್ತು ಎಂಬರ್ಥದಲ್ಲಿ ಈ ಸ್ಥಳನಾಮ

ಧರ್ಮಪುರ : ಧರ್ಮವುರ > ಧರ್ಮಪುರ

ಧರ್ಮ + ಪುರ = ಧರ್ಮಪುರ

ಧರ್ಮ = ಪುಣ್ಯ, ಸ್ವಭಾವ

ಪುಣ್ಯದ ಕೆಲಸವು ಈ ಊರಿನಲ್ಲಿ ನಡೆಯುತ್ತಿತ್ತು ಎಂಬರ್ಥದಲ್ಲಿ ಈ ಸ್ಥಳನಾಮ

ಧಾರಫಳ : ಧಾರ + ಫಳ = ಧಾರಫಳ

ಧಾರ = ರೋಗ, ವ್ಯಾಧಿ, ಭಯದನುಡಿ

ರೋಗ, ವ್ಯಾಧಿ ಆ ಊರಿನಲ್ಲಿ ವಿಶೇಷವಾಗಿ ಕಂಡು ಬಂದಿದ್ದರಿಂದ ಈ ಸ್ಥಳನಾಮ

ಧುದನಿಗೆ : ಧುತನ + ಇಗೆ = ಧುದನಿಗೆ

ಧುತ = ಅಲ್ಲಾಡಿಸಿದ, ಕಲಕಿದ

ಧೋರ : ಧೋರ = ಒಂದು ಬಗೆಯ ವಾದ್ಯ, ನಗಾರಿ, ಭೇರಿ

ಈ ಊರಲ್ಲಿ ನಗಾರಿ, ಭೇರಿಯು ಪ್ರಸಿದ್ಧವಾಗಿತ್ತು ಎಂಬರ್ಥದಲ್ಲಿ ಈ ಸ್ಥಳನಾಮ.

ನವಿಲೂರು : ನವಿಲು + ಊರು = ನವಿಲೂರು

ನವಿಲು = ಪಕ್ಷಿಯ ಹೆಸರು

ಊರು = ವಾಸ್ತವ್ಯವಾಚಿ

ನವಿಲು ಹೆಚ್ಚು ಇಲ್ಲಿ ವಾಸವಾಗಿದ್ದುದನ್ನು ಈ ಪ್ರಾಣಿವಾಚಿ ಸ್ಥಳನಾಮವು ಸೂಚಿಸುತ್ತದೆ.

ನಾಗನೂರು : ನಾಗನ + ಊರು = ನಾಗನೂರು

ನಾಗ = ಹಾವು

ಊರು = ವಾಸ್ತವ್ಯವಾಚಿ

ನಾಗರಹಾವು ಹೆಚ್ಚಿತ್ತು ಎಂಬರ್ಥದಲ್ಲಿ ಈ ಪ್ರಾಣಿವಾಚಿ ಸ್ಥಳನಾಮ

ನಾಗರಬಾವಿ : ನಾಗರ + ಬಾವಿ = ನಾಗರಬಾವಿ

ನಾಗರ = ನಾಗರಹಾವು, ತಲೆಯಲ್ಲಿ ಧರಿಸುವ ಒಂದು ಆಭರಣ

ಬಾವಿ = ನೀರಿಗಾಗಿ ತೋಡಿದ ಆಳವಾದ ಗುಂಡಿ, ವಾಪಿ

ಬಾವಿಯಲ್ಲಿ ನಾಗರಹಾವು ವಾಸವಾಗಿತ್ತು ಎಂಬರ್ಥದಲ್ಲಿ ಈ ಪ್ರಾಣಿವಾಚಿ ಸ್ಥಳನಾಮ.

ನೀಲೆಯಗಾಂವೆ : ನೀಲೆ + ಗಾಂವೆ = ನೀಲೆಯಗಾಂವೆ

ನೀಲೆ = ನೀಲಿಗಿಡ

ಗಾಂವೆ = ಗ್ರಾಮ

ವಿಶೇಷವಾಗಿ ನೀಲಿಗಿಡವು ಕಂಡು ಬಂದಿದ್ದ ಕಾರಣ ನೀಲೆಗಾಂವೆ ಎಂಬುದಾಗಿ ಈ ಸಸ್ಯವಾಚಿ ಸ್ಥಳನಾಮ.

ನುಳಗಾಲ : ನುಳ + ಕಾಲ = ನುಳಗಾಲ

ನುಳ = ಕಂಡಿ, ಸಂದು, ಇಕ್ಕಟ್ಟಾದ ಹಾದಿ

ಕಾಲ = ಸಮಯ, ವೇಳೆ

ಇಕ್ಕಟ್ಟಾದ ದಾರಿಯು ಆ ಊರಿಗೆ ಇದ್ದುದರ ನೆನಪಿಗಾಗಿ ಈ ಸ್ಥಳನಾಮ

ನೇರಲಿಗೆ : ನೇರಲ + ಇಗೆ = ನೇರಲಿಗೆ

ನೇರಲ್ = (ಬಲಹೀನವಾದ) ಜೋಲು, ನೇಲು

ಬಲಹೀನವಾದ ವ್ಯಕ್ತಿಯನ್ನು ನೆನಪಿಸುವ ಸಲುವಾಗಿ ಈ ಸ್ಥಳನಾಮ.

ಪದ್ಮಿಯ ಮಠ : ಪದ್ಮಿಯ + ಮಠ = ಪದ್ಮಿಯಮಠ

ಪದ್ಮಿಯ = ಕಮಲಗಳಿಂದ ಕೂಡಿದುದು

ಮಠ = ಸಂನ್ಯಾಸಿ, ಗುರು ಮುಂತಾದವರ ವಾಸಸ್ಥಾನ, ಪಾಠಶಾಲೆ

ಇಲ್ಲಿನ ಮಠದಲ್ಲಿ ಕಮಲಗಳು ಇದ್ದುದರಿಂದಾಗಿ ಈ ಸ್ಥಳನಾಮ.

ಪುರಿಕರೆ : ಪುರಿ + ಕರೆ = ಪುರಿಕರೆ

ಪುರಿ = ೧.ಪುರ, ಪಟ್ಟಣ, ನಗರ

೨. ಹಂಚಿನಲ್ಲಿಟ್ಟು ಅಥವಾ ಮರಳಿನಲ್ಲಿಟ್ಟು ಹುರಿಯುವಿಕೆ

೩. ಮಂಡಕ್ಕಿ, ಚುರುಮುರಿ

ಕರೆ = ಬರಹೇಳು, ಕೂಗು, ದಡ

ಪಟ್ಟಣದ ದಡದಲ್ಲಿ ಈ ಸ್ಥಳವು ಇದ್ದಿರಬೇಕು ಹಾಗಾಗಿ ಈ ಸ್ಥಳನಾಮ.

ಪೂವಿನ ಬಾಗೆ : ಪೂವಿನ + ಬಾಗೆ = ಪೂವಿನಬಾಗೆ

ಪೂವಿನ = ಹೂವಿನ

ಬಾಗೆ = ಮಣಿ, ಬಗ್ಗು

ಹೂವಿನ ಮಣಿಯು ಇದ್ದಿರಬೇಕು ಅದರ ನೆನಪಿಗಾಗಿ ಈ ಸ್ಥಳನಾಮ.

ಪೆನುಗೊಂಡೆ : ಪೆನು + ಕೊಂಡೆ = ಪೆನುಗೊಂಡೆ

ಪೆನು = ಬರೆಯಲು ಬಳಸುವ ಒಂದು ಬಗೆಯ ಸಾಧನ, ಲೇಖನಿ

ಕೊಂಡೆ = ೧. ಚಾಡಿಯ ಮಾತು

೨. ಕೊಕ್ಕೆ, ಬಾಗುಳ್ಳ ಮೊಳೆ

೩. ತುರುಬು ಕಟ್ಟಲು ಉಪಯೋಗಿಸುವ ಸಿಂಬೆಯಂಥ ಸಾಧನ

೪. ಒಂದು ಬಗೆಯ ಆಭರಣ

೫. ಗುನಿ ತಗೆಯದ ಕಾಳು

ಇಲ್ಲಿ ಬಾಗುಳ್ಳ ಮೊಳೆಯಂಥಹ ಬರೆಯಲು ಬಳಸುವ ಒಂದು ಬಗೆಯ ಸಾಧನ ಇದ್ದುದರಿಂದ ಈ ಸ್ಥಳನಾಮ



ಪೊಟ್ಟಲಕೆರೆ : ಪೊಟ್ಟಲ + ಕೆರೆ = ಪೊಟ್ಟಲಕೆರೆ
ಪೊಟ್ಟಳ = ಕಾಗದ, ಎಲೆ ಮೊದಲಾದವುಗಳಿಂದ ಮಾಡಿದ ಪುಡಿಕೆ, ದೊನ್ನೆ
ಕೆರೆ = ೧.ಉಗುರಿನಿಂದ ಗೀರು, ಗೀಚು
೨. ಕ್ಷೌರಮಾಡು, ಕೆತ್ತು
೩. ಏರಿ ಹಾಕಿ ನೀರು ನಿಲ್ಲಿಸಿದ ಸ್ಥಳ, ತಟಾಕ
ಇಲ್ಲಿನ ಕೆರೆಯೊಂದು ಪ್ರಸಿದ್ಧವಾದುದ್ದರಿಂದ ಅದರ ನೆನಪಿಗಾಗಿ ಈ ಸ್ಥಳನಾಮ.

ಪೊನ್ನವಾಡ : ಪೊನ್ನು + ವಾಡ = ಪೊನ್ನವಾಡ
ಪೊನ್ನು = ಗಧ್ಯಾಣ, ಧನ, ಹೊಂಬಣ್ಣ, ಶ್ರೇಷ್ಠವಾದದ್ದು
ವಾಡ = ಹಳ್ಳಿ
ಈ ಹಳ್ಳಿಯಲ್ಲಿ ಹೊನ್ನು ವಿಶೇಷವಾಗಿದ್ದುದರಿಂದ ಈ ಸ್ಥಳನಾಮ.



ಪೊರಗಾವೆ : ಪೊರ + ಗಾವೆ = ಪೊರಗಾವೆ
ಪೊರ = ಹೊರ
ಗಾವೆ = ಗ್ರಾಮ
ಹಳ್ಳಿಯು ಪಟ್ಟಣ ಅಥವಾ ನಗರದಿಂದ ಹೊರಭಾಗದಲ್ಲಿದ್ದುದರಿಂದ ಈ ಸ್ಥಳನಾಮ.

ಬನವಾಸಿ : ಬನ + ವಾಸಿ = ಬನವಾಸಿ
ಬನ = ಕಾಡು, ಅಡವಿ, ಅರಣ್ಯ
ವಾಸಿ = ಕೆಚ್ಚು, ಸ್ಥೈರ್ಯ, ವಾಸಮಾಡುವುದು, ನೆಲೆಸಿರುವವನು
ಕಾಡಿನಲ್ಲಿ ನೆಲೆಸಿರುವವನು ಎಂಬರ್ಥದಲ್ಲಿ ಈ ಸ್ಥಳನಾಮ.

ಬವರಗಾವೆ : ಬವರ + ಗಾವೆ = ಬವರಗಾವೆ
ಬವರ = ಯುದ್ಧ, ಕಾಳಗ, ಸಂಗ್ರಾಮ, ಜಗಳ, ಕಲಹ
ಗಾವೆ = ಕೆರೆಯಿಂದ ಆವೃತ್ತವಾದ ಗ್ರಾಮ
ಯುದ್ಧ, ಕಾಳಗವು ಹೆಚ್ಚಾಗಿದ್ದುದರಿಂದ ಈ ಸ್ಥಳನಾಮ.

ಬಳ್ಳಿಗಾವೆ : ಬಳ್ಳಿ + ಗಾವೆ = ಬಳ್ಳಿಗಾವೆ
ಬಳ್ಳಿ = ಮರಕ್ಕೆ ಸುತ್ತಿಕೊಂಡಿರುವ ತೆಳ್ಳನೆಯ ಸಸ್ಯ

ಗಾವೆ= ಕೆರೆಯಿಂದ ಆವೃತ್ತವಾದ ಗ್ರಾಮ

ಬಾಗಿವಾಡ : ಬಾಗಿ + ವಾಡ = ಬಾಗಿವಾಡ

ಬಾಗಿ=ಒಂದು ಬಗೆಯ ಮರ, ಬಾಗೆ.ಶಿರೀಷವೃಕ್ಷ

ನದಿಯ ತೀರದ ಜಮೀನು. ಫಲವತಾದ ಪ್ರದೇಶ

ವಾಡ= ಪಳ್ಳಿ.ಪಾಳ್ಯ

ಬಾದಾಮಿ : ಬಾದಾಮಿ = ಒಂದು ಬಗೆಯ ಮರ ಮತ್ತು ಅದರ ಪೌಷ್ಟಿಕವಾದ ಬೀಜ

ಬಾದಾಮಿ ಮರವು ಇದ್ದುದರ ಕಾರಣ ಈ ಸಸ್ಯವಾಚಿ ಸ್ಥಳನಾಮ.

ಬಾಯಿಗಾವೆ : ಬಾಯಿ + ಗಾವೆ = ಬಾಯಿಗಾವೆ

ಬಾಯಿ = ಮಾತು, ವಚನ

ಗಾವೆ = ಕೆರೆಯಿಂದ ಆವೃತ್ತವಾದ ಗ್ರಾಮ

ಮಾತಿಗೆ, ವಚನಕ್ಕೆ ಈ ಸ್ಥಳವು ಪ್ರಸಿದ್ಧವಾಗಿದ್ದು ಅದರ ಸುತ್ತ ಕೆರೆ ಇತ್ತು ಎಂಬುದನ್ನು ಈ ಸ್ಥಳನಾಮ ಸೂಚಿಸುತ್ತದೆ.

ಬಾವುಗೆಹಳ್ಳಿ : ಬಾವು + ಹಳ್ಳಿ = ಬಾವುಗೆಹಳ್ಳಿ

ಬಾವು = ೧.(ಪೆಟ್ಟು, ಕಾಯಿಲೆ ಮುಂತಾದವುಗಳಿಂದ ಉಂಟಾಗುವ) ಊತ, ಉಬ್ಬು

೨.ಹುಣ್ಣು, ವ್ರಣ

ಹಳ್ಳಿ = ಚಿಕ್ಕ ಊರು, ಗ್ರಾಮ

ಈ ಗ್ರಾಮದಲ್ಲಿ ಯಾವುದಾದರೂ ಕಲಹದ ಕಾರಣದಿಂದಲೋ ಬೇರಾವುದೋ ಕಾರಣಕ್ಕೆ ಬಹುತೇಕ ಜನರಿಗೆ ಪೆಟ್ಟಾಗಿ / ಖಾಯಿಲೆಯಿಂದ ಊತ ಬಂದಿರುವ ಹಿನ್ನೆಲೆಯಲ್ಲಿ ಈ ಸ್ಥಳನಾಮ.

ಬೋರಿಗಾವೆ : ಬೋರಿ + ಗಾವೆ = ಬೋರಿಗಾವೆ

ಬೋರಿ = ಒಂದು ಬಗೆಯ ಮರ ಮತ್ತು ಅದರ ಹಣ್ಣು, ಎಲಚಿ

ಗಾವೆ = ಕೆರೆಯಿಂದ ಆವೃತ್ತವಾದ ಗ್ರಾಮ

ಎಲಚಿ ಮರವು ಅಲ್ಲಿ ವಿಶೇಷವಾಗಿದ್ದುದರಿಂದ ಅದರ ಹೆಸರಾಗಿ ಈ ಸ್ಥಳನಾಮ.

ಭಂಡಾರಗೌಡಿಗೆ : ಭಂಡಾರ + ಗೌಡಿಗೆ = ಭಂಡಾರಗೌಡಿಗೆ

ಭಂಡಾರ = ಬೆಲೆಬಾಳುವ ವಸ್ತುಗಳನ್ನು ಸಂಗ್ರಹಿಸುವ ಸ್ಥಳ, ಬೊಕ್ಕಸ,
ಖಜಾನೆ
ಗೌಡಿಗೆ = ಅಧಿಪತ್ಯ
ಖಜಾನೆಯ ಅಧಿಪತ್ಯವು ಈ ಗ್ರಾಮದ್ದಾಗಿರಬೇಕು ಹಾಗಾಗಿ ಈ ಸ್ಥಳನಾಮ.

ಮಂಗಳಿವಾ(ಖೇ)ಡ : ಮಂಗಳಿ + ಖೇಡ = ಮಂಗಳಿಖೇಢ
ಮಂಗಳೆ = ದುರ್ಗೆ, ಪಾರ್ವತಿ
ಖೇಡ = ಎತ್ತರವಾದ ಕೋಟೆಯನ್ನುಳ್ಳ ಊರು
ಎತ್ತರವಾದ ಕೋತೆಯನ್ನುಳ್ಳ ಊರಿನಲ್ಲಿ ದುರ್ಗೆ, ಪಾರ್ವಯಿ ಇದ್ದು ಅದರ ಕಾರಣ ಈ ಸ್ಥಳನಾಮ.

ಮಂಗಳೂರು : ಮಂಗಳ + ಊರು = ಮಂಗಳೂರು
ಮಂಗಳ = ಶುಭಕರವಾದ, ಕಲ್ಯಾಣಕರವಾದ
ಊರು = ವಾಸ್ತವ್ಯವಾಚಿ
ಕಲ್ಯಾಣಕರವಾದ ವಾಸಸ್ಥಳ ಎಂಬರ್ಥದಲ್ಲಿ ಈ ಸ್ಥಳನಾಮ.

ಮಂಡಲಗಾವೆ : ಮಂಡಲ + ಗಾವೆ = ಮಂಡಲಗಾವೆ
ಮಂಡಲ = ವರ್ತುಲಾಕಾರವಾದ ಸೂರ್ಯ ಅಥವಾ ಚಂದ್ರ
ಗಾವೆ = ಕೆರೆಯಿಂದ ಆವೃತ್ತವಾದ ಗ್ರಾಮ
ವರ್ತುಲಾಕಾರವಾಗಿರುವ ಚಂದ್ರಬಿಂಬ ಕಾಣುವಂತ ಸ್ಥಳವಾಗಿದ್ದರಿಂದ ಈ ಸ್ಥಳನಾಮ.

ಮಂದುಬ್ಬೆ : ಮಂದು = ಸಣ್ಣಹಳ್ಳಿಗಳ ಗುಂಪು, ಆವರಣವಿಲ್ಲದ ನಿವೇಶನ,ಬಯಲು
ಸಣ್ಣಹಳ್ಳಿಗಳ ಗುಂಪಿದ್ದುದರಿಂದ ಈ ಸ್ಥಳನಾಮ.

ಮದನೂರು = ಮದನ + ಊರು = ಮದನೂರು
ಮದನ = ೧.ಕಾಮ, ವಿಷಯಾಸಕ್ತಿ
೨.ಕಾಮ, ಮನ್ಮಥ
೩.ದತ್ತೂರದಗಿಡ, ಉಮ್ಮತ್ತ
ಊರು = ವಾಸ್ತವ್ಯವಾಚಿ
ದತ್ತೂರದಗಿಡವಿದ್ದ ಹಿನ್ನೆಲೆಯಲ್ಲಿ ಈ ಸಸ್ಯವಾಚಿ ಸ್ಥಳನಾಮ.

ಮನ್ನೆದಡಿ : ಮನ್ನೆ = ಮಾನ್ಯವಾಗಿ ಕಟ್ಟಿದ

ಮಾನ್ಯವಾಗಿ ಕಟ್ಟಿದ ಗ್ರಾಮವಾಗಿದ್ದರಿಂದ ಈ ಸ್ಥಳನಾಮ.

ಮಾರಿಡಿಗೆ : ಮಾರುಡ + ಇಗೆ = ಮಾರುಡಿಗೆ
ಮಾರುಡ = ಒಂದು ಬಗೆಯ ಮರ ಮತ್ತು (ಉಪ್ಪಿನ ಕಾಯಿಗೆ ಬಳಸುವ)
ಅದರ ಕಾಯಿ, ಬಿಲ್ವಪತ್ರೆ, ಬೆಲ್ಲವತ್ತ
ಉಪ್ಪಿನಕಾಯಿಗೆ ಬಳಸುವ ಒಂದು ಬಗೆಯ ಮರ ಇದ್ದುದರಿಂದ ಈ ಸ್ಥಳನಾಮ.

ಮಾಲಂಗೆರೆ : ಮಾಲಂ + ಕೆರೆ = ಮಾಲಂಗೆರೆ
ಮಾಲ = ೧. ಎತ್ತರವಾದ ಪ್ರದೇಶ, ದಿಬ್ಬ
೨. ಹಳ್ಳಿಯ ಬಳಿಯಿರುವ ಕಾಡು
ಎತ್ತರದ ಪ್ರದೇಶ, ದಿಬ್ಬದಲ್ಲಿನ ಗ್ರಾಮ ಎಂಬರ್ಥದಲ್ಲಿ ಈ ಸ್ಥಳನಾಮ.

ಮಾಳವಿಡಿಗೆ : ಮಾಳವಿಡ + ಇಗೆ = ಮಾಳವಿಡಿಗೆ
ಮಾಳ = ೧. ಗಂಡು ಬೆಕ್ಕು
೨. (ಎತ್ತರವಾದ) ಬಯಲುಪ್ರದೇಶ, ಮೈದಾನ
೩. ಉಪ್ಪು ತಯಾರಿಸುವ ಸ್ಥಳ – ಕಣ
ಉಪ್ಪನ್ನು ತಯಾರಿಸುವ ಸ್ಥಳ – ಕಣ ಇದ್ದುದರಿಂದ ಈ ಸ್ಥಳನಾಮ.

ಮಾಳಿ(ಲಿ)ಗೆ : ಮಾಳಿಗೆ = ೧. ಮೇಲಿನ ಅಂತಸ್ತು, ಮಹಡಿ, ಉಪ್ಪರಿಗೆ
೨. ಮನೆಯ ಮೇಲಿನ ಮಣ್ಣಿನ ಹೊದಿಕೆ, ಮಣ್ಣಿನ ಮೇಲ್ಹಾವಣಿ
ಈ ಗ್ರಾಮದಲ್ಲಿನ ಮನೆಗಳಿಗೆ ಮಣ್ಣಿನ ಹೊದಿಕೆ ಇದ್ದುದರಿಂದಾಗಿ ಈ ಸ್ಥಳನಾಮ.

ಮಿರಿಂಜೆ : ಮಿರಿಂಜೆ > ಮಿರಜಿ

ಮುದ್ದಗೋಡು : ಮುದ್ದ + ಗೋಡು = ಮುದ್ದಗೋಡು
ಮುದ್ದ = ಚೆಲುವ, ಸುಂದರ
ಗೋಡು = ಮಣ್ಣು, ಕೆರೆ ಮುಂತಾದವುಗಳಿಂದ ತೆಗೆದು ಹಾಕಿರುವ
ಸಾರವತ್ತಾದ
ಹೂಳುಮಣ್ಣು, ರೇವೆಮಣ್ಣು
ಸುಂದರವಾದ ಹೂಳುಮಣ್ಣು, ರೇವೆಮಣ್ಣು ಎಂಬರ್ಥದಲ್ಲಿ ಈ ಸ್ಥಳನಾಮ.

ಮುದಿನೀರು : ಮುದಿ + ನೀರು = ಮುದಿನೀರು

ಮುದಿ = ಮಾಸಿದ

ನೀರು = ಜಲ, ಉದಕ

ಮಾಸಿದ, ಅಳಿದ ನೀರು ಎಂಬರ್ಥದಲ್ಲಿ ಈ ಸ್ಥಳನಾಮ.

ಮೊರಂಬ : ಮೊರಂಬ > ಮುರಮ್

ಮೋರಖಂಡಿ : ಮೋರ + ಖಂಡಿ = ಮೋರಖಂಡಿ

ಮೋರ = ನವಿಲು, ಮಯೂರ

ಖಂಡಿ = ೧. ಕಿಂಡಿ, ರಂಧ್ರ

೨. ಒಂದು ಖಂಡಿಯಷ್ಟು ಬೀಜವರಿಯುಳ್ಳ ಭೂಮಿ

ಲಕ್ಕಿಗುಂಡಿ : ಲೆಕ್ಕಿಗುಂಡಿ > ಲೊಕ್ಕಿಗುಂಡಿ > ಲಕ್ಕುಂಡಿ

ಲಕ್ಕಿ + ಗುಂಡಿ = ಲಕ್ಕುಂಡಿ

ಲಕ್ಕಿ = ೧. ಐಶ್ವರ್ಯ, ಸಂಪತ್ತು

೨. ವಿಷ್ಣುವಿನ ಹೆಂಡತಿ, ಲಕ್ಷ್ಮಿ

ಗುಂಡಿ = ಬಿಲ, ಡೊಗರು, ಗುಣಿ

ಸಂಪತ್ತು ಇರುವಂತಹ ಬಿಲ ಎಂಬರ್ಥದಲ್ಲಿ ಈ ಸ್ಥಳನಾಮ.

ಲಟ್ಟಲೂ(ನೂ)ರು : ಲಟ್ಟಲೂರು > ಲಾತೂರ್

ಲಟ್ಟಲ + ಊರು = ಲಟ್ಟಲೂರು

ಲಟ್ಟ = ದುಷ್ಟ, ನೀಚ, ದೂರ್ತ

ದುಷ್ಟ ವ್ಯಕ್ತಿಯೊಬ್ಬ ಇಲ್ಲಿದ್ದಿದ್ದರ ನೆನಪಿನಲ್ಲಿ ಈ ವ್ಯಕ್ತಿವಾಚಿ ಸ್ಥಳನಾಮ.

ಲಳಿಗೆಯ ಸೀಮೆ : ಲಳಿಗೆ + ಸೀಮೆ = ಲಳಿಗೆಯ ಸೀಮೆ

ಲಳಿಗೆ = ನಳಿಕೆ, ಕೊಳವೆ

ಸೀಮೆ = ಎಲ್ಲೆ, ಗಡಿ, ಮೇರೆ

ಗಡಿಭಾಗದಲ್ಲಿದ್ದು ವಿಶೇಷವಾಗಿ ಕೊಳವೆಯನ್ನು ಹೊಂದಿದ್ದರ ಫಲವಾಗಿ ಈ ಸ್ಥಳನಾಮ.

ಲಿಂಗಾಪುರ : ಲಿಂಗ + ಪುರ = ಲಿಂಗಾಪುರ

ಲಿಂಗ = ೧. ಚಿಹ್ನೆ, ಗುರುತು

೨. ಪ್ರಮಾಣ, ಪುರಾವೆ

ಪುರ = ಪಟ್ಟಣ, ನಗರ

ಪುರಾವೆಯನ್ನು ಹೊಂದಿದ್ದ ಪಟ್ಟಣವಾಗಿದ್ದರಿಂದ ಲಿಂಗಾಪುರ ಎಂಬ ಸ್ಥಳನಾಮ.

ಲೆಂಬಳಪಾಟಕ : ಲೆಂಬಳ + ಪಾಟಕ = ಲೆಂಬಳಪಾಟಕ
ಪಾಟಕ = ಓದುವವನು
ಬ್ರಾಹ್ಮಣರು ಇಲ್ಲಿ ನೆಲೆಸಿದ್ದರಿಂದ ಈ ವ್ಯಕ್ತಿವಾಚಿ ಸ್ಥಳನಾಮ.

ಲೋಣಾರ : ಲೋಣಾರ = ಉಪ್ಪು ಮಾರುವವನು, ಉಪ್ಪಾರ
ಉಪ್ಪಾರರು ಇಲ್ಲಿ ನೆಲೆಸಿದ್ದರಿಂದಾಗಿ ಈ ಕುಲವಾಚಕ ಸ್ಥಳನಾಮ.

ವಂಗಿಗೆ : ವಂಗ + ಇಗೆ = ವಂಗಿಗೆ
ವಂಗ = ಒಂದು ಬಗೆಯ ಲೋಹ, ತವರ
ತವರವು ಇಲ್ಲಿ ವಿಶೇಷವಾಗಿ ದೊರೆಯುತ್ತಿದ್ದುದರ ನೆನಪಿಗಾಗಿ ಈ ಸ್ಥಳನಾಮ.

ವಡಗಾವಿ : ವಡ + ಗಾವಿ =ವಡಗಾವಿ
ವಡ = ೧. ಹಿರಿಯ, ಪೂಜ್ಯ
೨. ಹಳೆಯದಾದ, ಪ್ರಾಚೀನ
ಗಾವಿ = ಗ್ರಾಮ
ಪ್ರಾಚೀನ ಸ್ಥಳ ಎಂಬುದರಿಂದಾಗಿ ಈ ಸ್ಥಳನಾಮ.

ವಳಗಾವೆ : ವಳ > ವಳ್ಳ > ವಾಳ
ವಳ+ ಗಾವೆ =ವಳಗಾವೆ
ವಾಳ = ೧. ಪುಲ್ಲಿಂಗ ನಾಮವಾಚಕಗಳಿಗೆ ಹತ್ತುವ ಒಂದು ಪ್ರತ್ಯಯ
೨. ಚೇಳಿನ ಕೊಂಡಿ
ಚೇಳು ಇಲ್ಲಿ ಹೆಚ್ಚಾಗಿದ್ದುದರಿಂದ ಈ ಸ್ಥಳನಾಮ.

ವಳವಾಡ : ವಳ > ವಳ್ಳ > ವಾಳ > ವಾಡ
ವಳ + ವಾಡ = ವಳವಾಡ
ವಳ = ಚೇಳಿನ ಕೊಂಡಿ
ವಾಡ = ಚಿಕ್ಕ ಗ್ರಾಮ
ಚೇಳು ಇಲ್ಲಿ ಹೆಚ್ಚಾಗಿದ್ದುದರಿಂದ ಈ ಸ್ಥಳನಾಮ.

ವಳ್ಳಿಯಪುರ : ವಳ್ಳಿ > ಬಳ್ಳಿ

ವಳ್ಳಿಯ + ಪುರ =ವಳ್ಳಿಯಪುರ
ಬಳ್ಳಿ = ೧. ಹಬ್ಬಿ ಬೆಳೆಯುವ ಸಸ್ಯ, ಲತೆ, ಹಂಬು
೨. ವಂಶದ ಕುಡಿ, ಸಂತತಿ
ಪುರ = ವಾಸ್ತವ್ಯವಾಚಿ
ಬಳ್ಳಿಯು ವಿಶೇಷವಾಗಿದ್ದುದರಿಂದ ಈ ಸಸ್ಯವಾಚಿ ಸ್ಥಳನಾಮ.

ವಿಜೆಯಪುರ : ವಿಜೆಯ + ಪುರ = ವಿಜೆಯಪುರ
ವಿಜೆಯಪುರ = ವಿಜಯವನ್ನು ಪಡೆದುದಕ್ಕಾಗಿ ಕಟ್ಟಿದ ಪುರ
ವಿಜಯವನ್ನು ಪಡೆದುದರ ನೆನಪಿಗಾಗಿ ಈ ಸ್ಥಳನಾಮ.

ವೇಣುಗ್ರಾಮ : ವೇಣು + ಗ್ರಾಮ = ವೇಣುಗ್ರಾಮ
ವೇಣು = ಬಿದಿರು, ಬೊಂಬು
ಗ್ರಾಮ = ನೂರಕ್ಕೆ ಹೆಚ್ಚಿಲ್ಲದ ಐನೂರಕ್ಕಿಂತ ಹೆಚ್ಚಾಗದಂತೆ ಕೃಷಿಕ
ಕುಟುಂಬಗಳು
ವಾಸಮಾಡುವ ಹಳ್ಳಿ
ಬಿದಿರು ಹೆಚ್ಚಾಗಿದ್ದಿರಬೇಕು ಅದನ್ನು ಸೂಚಿಸಲು ಈ ಸಸ್ಯವಾಚಿ ಸ್ಥಳನಾಮ.

ವೊಕ್ಕಲಗಾವೆ : ವೊಕ್ಕಲ + ಗಾವೆ = ವೊಕ್ಕಲಗಾವೆ
ವೊಕ್ಕಲ = ಬೇಸಾಯ
ಗಾವೆ = ಕೆರೆಯಿಂದ ಆವೃತವಾದ ಗ್ರಾಮ
ಬೇಸಾಯವನ್ನೆ ಅವಲಂಬಿಸಿದ್ದ ಜನರು ಹೆಚ್ಚಾಗಿದ್ದುದಕ್ಕಾಗಿ ಈ ಸ್ಥಳನಾಮ.

ಸವರವಳ್ಳಿ : ಸವರ + ಹಳ್ಳಿ = ಸವರವಳ್ಳಿ
ಸವರ = ಚಿನ್ನ
ಹಳ್ಳಿ = ಚಿಕ್ಕ ಊರು, ಗ್ರಾಮ
ಚಿನ್ನವು ವಿಶೇಷವಾಗಿದ್ದುದರಿಂದ ಈ ಸ್ಥಳನಾಮ.

ಸವಿತಾಣ : ಸವಿ + ತಾಣ = ಸವಿತಾಣ
ಸವಿ = ಸಂತೋಷಪಡು, ಪಾನಮಾಡು, ನಲಿ
ತಾಣ = ನೆಲೆ, ಬೀಡು, ಇಂಬು, ಆಶ್ರಯ, ಸ್ಥಳ
ಸಂತೋಷಕ್ಕೆ ಇಂಬುಕೊಡುವಂತ ನೆಲೆ ಎಂಬರ್ಥದಲ್ಲಿ ಈ ಸ್ಥಳನಾಮ.

ಸಿಂಗಡಿಗಾವೆ : ಸಿಂಗಡಿ + ಗಾವೆ = ಸಿಂಗಡಿಗಾವೆ

ಸಿಂಗಡಿ > ಸಿಂಗಾಡಿ = ಬಿಲ್ಲು ಧನಸ್ಸು

ಗಾವೆ = ಕೆರೆಯಿಂದ ಆವೃತವಾದ ಗ್ರಾಮ.

ಸಿಗ್ಗಾವೆ : ಸಿಗ್ಗು + ಗಾವೆ = ಸಿಗ್ಗಾವೆ

ಸಿಗ್ಗು = ಒಂದು ಬಗೆಯ ಮರ, ನುಗ್ಗೆಯ ಮರ

ಗಾವೆ = ಕೆರೆಯಿಂದ ಆವೃತವಾದ ಗ್ರಾಮ.

ನುಗ್ಗೆಯ ಮರವು ಇಲ್ಲಿ ವಿಶೇಷವಾಗಿದ್ದುದರಿಂದ ಈ ಸಸ್ಯವಾಚಿ ಸ್ಥಳನಾಮ.

ಸಿರಿಗುಪ್ಪೆ : ಸಿರಿ + ಕುಪ್ಪೆ = ಸಿರಿಗುಪ್ಪೆ

ಸಿರಿ = ಸಂಪತ್ತು, ವೈಭವ

ಕುಪ್ಪೆ = ರಾಶಿ, ಗುಡ್ಡೆ, ಒಟ್ಟಲು, ಸಮೂಹ

ಸಂಪತ್ತಿನ ರಾಶಿಯೇ ಇತ್ತು ಎಂಬರ್ಥದಲ್ಲಿ ಈ ಸ್ಥಳನಾಮ.

ಸಿರಿವೊಳಲು : ಸಿರಿ + ವೊಳಲು = ಸಿರಿವೊಳಲು

ಸಿರಿ = ಸಂಪತ್ತು, ವೈಭವ

ವೊಳಲು = ಪಟ್ಟಣ

ಸಂಪತ್ತಿನ ಪಟ್ಟಣವಾಗಿತ್ತು ಎಂಬರ್ಥದಲ್ಲಿ ಈ ಸ್ಥಳನಾಮ.

ಸೋಗಲ : ಸೋಗು =ಒಯ್ಯಾರ ಒನಪು

ಒಯ್ಯಾರ ಒನಪಿನಿಂದ ಕೂಡಿದ ಜನರಿದ್ದರೆಂಬ ಅರ್ಥದಲ್ಲಿ ಈ ಸ್ಥಳನಾಮ.

ಸೋಮತೀರ್ಥ : ಸೋಮ + ತೀರ್ಥ = ಸೋಮತೀರ್ಥ

ಸೋಮ = ಒಂದು ಬಗೆಯ ಸಸ್ಯ, ಕೋಡಂಬಳ್ಳಿ

ತೀರ್ಥ = ಸೋಮ ಸಸ್ಯದಿಂದ ತಾಳು ಅಥವಾ ಕಾಂಡದಿಂದ ತೆಗೆದ ರಸ.

ಕೋಡಂಬಳ್ಳಿ ಸಸ್ಯದ ತಾಳು ಅಥವಾ ಕಾಂಡದಿಂದ ತೆಗೆದ ರಸವನ್ನು ತೀರ್ಥವಾಗಿ ಬಳಸುತ್ತಿದ್ದುದರಿಂದ ಈ ಸಸ್ಯವಾಚಿ ಸ್ಥಳನಾಮ.

ಹಾಡಲಿವಾಡ : ಹಾಡಲಿ + ವಾಡ =ಹಾಡಲಿವಾಡ

ಹಾಡ = ೧. ಒಂದು ನಿರ್ದಿಷ್ಟ ಅಳತೆ ಮತ್ತು ಆ ಅಳತೆಯ ಸಾಧನವಾದ ಬುದ್ದಲಿ,ಪಾತ್ರೆ

೨. ಒಂದು ನಿರ್ದಿಷ್ಟ ಅಳತೆಯ ಬೀಜವರಿಯ ಭೂಮಿ

ವಾಡ = ಹಳ್ಳಿ, ಪಾಳ್ಯ

ಒಂದು ನಿರ್ದಿಷ್ಟವಾದ ಅಳತೆಯ ಬೀಜವರಿಯ ಭೂಮಿ ಇರುವ ಹಳ್ಳಿ ಎಂಬರ್ಥದಲ್ಲಿ ಈ ಸ್ಥಳನಾಮ.

ಹಾಲಿಯ ಸೆಟ್ಟಿ : ಹಾಲಿ + ಸೆಟ್ಟಿ = ಹಾಲಿಯಸೆಟ್ಟಿ

ಹಾಲಿ = ಸದ್ಯದಲ್ಲಿ, ಈಗ, ಪ್ರಕೃತ

ಸೆಟ್ಟಿ = ೧. ವ್ಯಾಪಾರಿ ವರ್ತಕ

೨. ಮುಖಂಡ ಮುಖ್ಯಸ್ಥ

ಈಗ ಇರುವ ಮುಖಂಡ ಎಂಬರ್ಥದಲ್ಲಿ ಈ ವ್ಯಕ್ತಿವಾಚಿ ಸ್ಥಳನಾಮ.

ಹಾವಿನ ಹೇರಲಿಗೆ : ಹಾವು + ಹೇರಲಿಗೆ = ಹಾವಿನ ಹೇರಲಿಗೆ

ಹಾವು = ಸರೀಸೃಪವರ್ಗಕ್ಕೆ ಸೇರಿದ ಒಂದು ಜಂತು, ಸರ್ಪ

ಹೇರಳ(ಲ) = ಅಧಿಕ, ಹೆಚ್ಚಳ

ಸರ್ಪ ಹೆಚ್ಚಾಗಿದೆ ಎಂಬರ್ಥದಲ್ಲಿ ಈ ಸ್ಥಳನಾಮ.

ಹಿಪ್ಪಳಗಾವೆ : ಹಿಪ್ಪ + ಗಾವೆ = ಹಿಪ್ಪಳಗಾವೆ

ಹಿಪ್ಪ > ಇಪ್ಪೆ = ಒಂದು ಬಗೆಯ ಮರ ಇಪ್ಪೆ

ಗಾವೆ = ಕೆರೆಯಿಂದ ಆವೃತವಾದ ಗ್ರಾಮ

ಇಪ್ಪೆ ಮರವಿದ್ದು ಅದು ಕೆರೆಯಿಂದ ಆವೃತವಾಗಿತ್ತು ಎಂಬರ್ಥದಲ್ಲಿ ಈ ಸಸ್ಯವಾಚಿ ಸ್ಥಳನಾಮ.

ಹುಬ್ಬರವಳ್ಳಿ = ಹುಬ್ಬರ + ಹಳ್ಳಿ = ಹುಬ್ಬರವಳ್ಳಿ

ಹುಬ್ಬ = ಹಂದಿಯ ರೋಮ (ಆಭರವಣವನ್ನು ತೊಳೆಯಲು ಬಳಸುವ ಕುಂಚದಲ್ಲಿ

ಉಪಯೋಗಿಸುವ)

ಹಳ್ಳಿ = ಚಿಕ್ಕ ಗ್ರಾಮ

ಹಂದಿಯ ರೋಮ ಹೆಚ್ಚಾಗಿದ್ದು, ಚಿಕ್ಕ ಗ್ರಾಮವಾಗಿತ್ತು ಎಂಬರ್ಥದಲ್ಲಿ ಈ ಸ್ಥಳನಾಮ.

ಹೂಳಜೆ : ಹೂಳಜೆ = ಒಂದು ಗ್ರಾಮ ದೇವತೆಯ ಹೆಸರು

ಹೊಟ್ಟಲಕೆರೆ : ಹೊಟ್ಟಲ + ಕೆರೆ =ಹೊಟ್ಟಲಕೆರೆ

ಹೊಟ್ಟು = ೧. ಧಾನ್ಯದ ಮೇಲಿನ (ನಿಸ್ಸಾರವಾದ) ಸಿಪ್ಪೆ,ಕವಚ

೨. ಮರದ ಪುಡಿ

ಕೆರೆ = ಏರಿ ಹಾಕಿ ನೀರು ನಿಲ್ಲಿಸಿವ ಸ್ಥಳ, ತಟಾಕ

ಧಾನ್ಯದ ಮೇಲಿನ ಸಿಪ್ಪೆ ಅಥವಾ ಮರದ ಪುಡಿಯು ಕೆರೆಯ ತುಂಬ ಇತ್ತು ಎಂಬರ್ಥದಲ್ಲಿ ಈ ಸ್ಥಳನಾಮ.

## ೪.೨ ಸ್ಥಳನಾಮಗಳ ಭಾಷಿಕ ಅಧ್ಯಯನ

ಸ್ಥಳನಾಮ ಅಧ್ಯಯನಕ್ಕೂ ಭ್ಹಾಷಾ ವಿಜ್ಞಾನಕ್ಕೂ ಹತ್ತಿರದ ಸಂಬಂಧವಿದೆ. ಸ್ಥಳನಾಮಗಳ ಶೋಧನೆಯಲ್ಲಿ ತೊಡಗಿದ ಸಂಶೋಧಕನಿಗೆ ಭಾಷೆಯ ಒಳಹೊರಹುಗಳ ಜ್ಞಾನವಿರಬೇಕು. ಏಕೆಂದರೆ, ಭಾಷಾವಿಜ್ಞಾನದ ದೃಷ್ಟಿಯಿಂದ ಸಳನಾಮಗಳ ಅಧ್ಯಯನಕ್ಕೆ ವಿಶಿಷ್ಟ ಸ್ಥಾನವಿದೆ. ಭಾಷಾವಿಜ್ಞಾನಿಗಳು ಊರ ಹೆಸರುಗಳನ್ನು ( ಸ್ಥಳನಾಮಗಳನ್ನು) ನಿರ್ದಿಷ್ಟ ಮತ್ತು ವಾರ್ಗಿಕ (specific and generic) ಎಂಬೆರಡು ಘಟಕಗಳಲ್ಲಿ ವಿಭಜಿಸಿ, ಅಧ್ಯಯನ ಮಾಡಿರುವುದುಂಟು. 'ನಿರ್ದಿಷ್ಟ'ವೆಂದರೆ ವಿಶಿಷ್ಟ (specific) ಎಂದರ್ಥ. ಅಂದರೆ ಯಾವುದಾದರೊಂದು ವಿಷಯವನ್ನು ಒಳಗೊಂಡಿರುವಂಥಹದ್ದು. "ವಾರ್ಗಿಕ" ಎಂದರೆ ಊರುಗಳ ಉತ್ತರಾರ್ಧ ಘಟಕ (generic) ಇದರಲ್ಲಿ ವಿಷಯ ಪ್ರಸ್ತಾಪವಿರದು. ಉದಾಹರಣೆಗೆ: ಊರು, ಪುರ, ಕಟ್ಟೆ, ಕೆರೆ, ಬೆಟ್ಟ, ಕೋಡು, ಗುಡ್ಡ, ಗಾಲ, ಗುಪ್ಪೆ, ವಾಡಿ, ಹುಂಡಿ, ಕೊಪ್ಪಲು, ಬಾಳು, ಪೇಟೆ, ಗೂಡು, ಪೋಡು, ಬೀಡು, ಸಮುದ್ರ, ಹಳ್ಳ, ಹಳ್ಳಿ, ಹೊಳೆ, ಈ ಮುಂತಾದ ಘಟಕಗಳಲ್ಲಿ ಯಾವುದಾದರೊಂದನ್ನು ಒಳಗೊಂಡು ಕೊನೆಗೊಳ್ಳುವುದು. ವಾರ್ಗಿಕಗಳಾಗಿ ಬಳಕೆಯಾಗುವ ಆಕೃತಿಮಾಗಳು ಕೆಲವೊಮ್ಮೆ ನಿರ್ದಿಷ್ಟಗಳಾಗಿ, ಬಳಕೆಯಾಗಬಹುದು, ಕಟ್ಟೆಪುರ, ಕಲ್ಲುಪುರ, ಕಳ್ಳಿಪುರ, ಕೋಡಿಉಗನೆ, ಹಿತ್ತಲಗುಡ್ಡ, ಕಾಡಹಳ್ಳಿ, ನಗರಪುರ, ಬೆಟ್ಟಹಳ್ಳಿ, ಬೆಟ್ಟದಪುರ ಮತ್ತು ಹಳ್ಳಿಕೆರೆ ಹುಂಡಿ ಎಂಬುದನ್ನು ಸಹ ನೋಡಬಹುದು. ಭಾಷವಿಜ್ಞಾನದ ಸಂದರ್ಭದಲ್ಲಿ ನಿರ್ದಿಷ್ಟ ಮತ್ತು ವಾರ್ಗಿಕಗಳು ಪ್ರತ್ಯೇಕವಾದ ಆಕೃತಿಮಾಗಳೇ ಆಗಿವೆ. ಈ ಆಕೃತಿಮಾಗಳು ಒಟ್ಟೊಟ್ಟಿಗೆ ಸೇರುವಾಗ ಧ್ವನಿವ್ಯತ್ಯಾಸ ಮತ್ತು ಅರ್ಥವ್ಯತ್ಯಾಸ ಉಂಟಾಗುತ್ತದೆ.

## ಮಹಾರಾಷ್ಟ್ರದ ಕನ್ನಡ ಶಾಸನೋಕ್ತ ಸ್ಥಳನಾಮದ ವಾರ್ಗಿಕ ನಿರ್ದಿಷ್ಟ ಪಟ್ಟಿ

| ಕ್ರಸಂ | ಸ್ಥಳನಾಮಗಳು | ವಾರ್ಗಿಕ | ನಿರ್ದಿಷ್ಟ |
|---|---|---|---|
| ೦೧ | ಅಣಲಿಗೆಯೂರು | ಅಣಲಿಗೆ | ಊರು |
| ೦೨ | ಆಲೂರು | ಆಲ | ಊರು |
| ೦೩ | ಕಂಕಣನೂರು | ಕಂಕಣನ | ಊರು |
| ೦೪ | ಕಟ್ಟಾಕೂರು | ಕಟ್ಟಾಕು | ಊರು |
| ೦೫ | ಕಾಡೂರು | ಕಾಡು | ಊರು |
| ೦೬ | ಕೆರೆಯೂರು | ಕೆರೆ | ಊರು |
| ೦೭ | ಕೊಳನೂರು | ಕೊಳ | ಊರು |
| ೦೮ | ಕೋರಾವೂರು | ಕೋರಾ | ಊರು |
| ೦೯ | ತಡಗೂರು | ತಡಗ | ಊರು |
| ೧೦ | ತಡವಿಶಾಲೂರು | ತಡವಿಶಾಲ | ಊರು |
| ೧೧ | ದರಿಯೂರು | ದರಿ | ಊರು |
| ೧೨ | ದಿಂಡವೂರು | ದಿಂಡ | ಊರು |
| ೧೩ | ದೇವನೂರು | ದೇವ | ಊರು |
| ೧೪ | ಲತ್ತನೂ(ಲೂ)ರು | ಲತ್ತಲ | ಊರು |
| ೧೫ | ನವಿಲೂರು | ನವಿಲು | ಊರು |
| ೧೬ | ನಾಗನೂರು | ನಾಗ | ಊರು |
| ೧೭ | ನಾಮಂದೂರು | ನಾಮಂದ | ಊರು |
| ೧೮ | ಮಂಗಳೂರು | ಮಂಗಳ | ಊರು |
| ೧೯ | ಮದನೂರು | ಮದನ | ಊರು |
| ೨೦ | ಅಪ್ಪಯ್ಯಣವೀಡು | ಅಪ್ಪಯ್ಯ | ವೀಡು |
| ೨೧ | ಅರಸಿಯಬೀಡು | ಅರಸಿ | ವೀಡು |
| ೨೨ | ಅಮರಾವತಿಪುರ | ಅಮರಾವತಿ | ಪುರ |
| ೨೩ | ಇಂದೀಪುರ | ಇಂದೀ | ಪುರ |
| ೨೪ | ಕೊಲ್ಲಾಪುರ | ಕೊಲ್ಲ | ಪುರ |
| ೨೫ | ಕ್ಷುಲ್ಲಕಪುರ | ಕ್ಷುಲ್ಲಕ | ಪುರ |
| ೨೬ | ಜಯಂತೀಪುರ | ಜಯಂತಿ | ಪುರ |
| ೨೭ | ದ್ವಾರಾವತೀಪುರ | ದ್ವಾರಾವತಿ | ಪುರ |
| ೨೮ | ಧರ್ಮಪುರ | ಧರ್ಮ | ಪುರ |
| ೨೯ | ಲಿಂಗಾಪುರ | ಲಿಂಗಾ | ಪುರ |
| ೩೦ | ವಳ್ಳಿಯಪುರ | ವಳ್ಳಿ | ಪುರ |
| ೩೧ | ತಗರಪುರ | ತಗರ | ಪುರ |
| ೩೨ | ವಿಜಯಪುರ | ವಿಜಯ | ಪುರ |
| ೩೩ | ಉಕ್ಕುಳಗಾವೆ | ಉಕ್ಕುಳ | ಗಾವೆ |

| | | | |
|---|---|---|---|
| ೩೪ | ಕಲ್ಲುಕುಂಬರಿಗಾವೆ | ಕಲ್ಲುಕುಂಬರಿ | ಗಾವೆ |
| ೩೫ | ಕಾವಳಿಗಾವೆ | ಕಾವಳಿ | ಗಾವೆ |
| ೩೬ | ಗಾವುಂಡಗಾವೆ | ಗಾವುಂಡ | ಗಾವೆ |
| ೩೭ | ಗುಂಗುರುಗಾವೆ | ಗುಂಗುರು | ಗಾವೆ |
| ೩೮ | ಗುಂಜಯಗಾವೆ | ಗುಂಜಯ | ಗಾವೆ |
| ೩೯ | ಚೆಂಡೆಯಗಾವೆ | ಚೆಂಡೆ | ಗಾವೆ |
| ೪೦ | ಚೋಳಗಾವೆ | ಚೋಳ | ಗಾವೆ |
| ೪೧ | ಚೌಗಾವೆ | ಚೌ | ಗಾವೆ |
| ೪೨ | ಜಂಬುಗಾವೆ | ಜಂಬು | ಗಾವೆ |
| ೪೩ | ದೆಯಗಾವೆ | ದೆಯ | ಗಾವೆ |
| ೪೪ | ದೇಗಾವೆ | ದೇ | ಗಾವೆ |
| ೪೫ | ದೊಂಗರಿಗಾವೆ | ದೊಂಗರಿ | ಗಾವೆ |
| ೪೬ | ವಡಗಾವೆ | ವಡ | ಗಾವೆ |
| ೪೭ | ವಳಗಾವೆ | ವಳ | ಗಾವೆ |
| ೪೮ | ವೊಕ್ಕಲಗಾವೆ | ವೊಕ್ಕಲ | ಗಾವೆ |
| ೪೯ | ಸಿಂಗಡಿಗಾವೆ | ಸಿಂಗಡಿ | ಗಾವೆ |
| ೫೦ | ಸಿಗ್ಗಾವೆ | ಸಿಗ್ಗ | ಗಾವೆ |
| ೫೧ | ಸುಗ್ಗಾವೆ | ಸುಗ್ಗ | ಗಾವೆ |
| ೫೨ | ಬವರಗಾವೆ | ಬವರ | ಗಾವೆ |
| ೫೩ | ಬಳ್ಳಿಗಾವೆ | ಬಳ್ಳಿ | ಗಾವೆ |
| ೫೪ | ಬಾಯಿಗಾವೆ | ಬಾಯಿ | ಗಾವೆ |
| ೫೫ | ಬೋರಿಗಾವೆ | ಬೋರಿ | ಗಾವೆ |
| ೫೬ | ಮಂಡಲಗಾವೆ | ಮಂಡಲ | ಗಾವೆ |
| ೫೭ | ಹಿಪ್ಪಳಗಾವೆ | ಹಿಪ್ಪಳ | ಗಾವೆ |
| ೫೮ | ಪೊರಗಾವೆ | ಪೊರ | ಗಾವೆ |
| ೫೯ | ಕುಂಟವಾಡ | ಕುಂಟ | ವಾಡ |
| ೬೦ | ಚಂಡಿವಾಡ | ಚಂಡಿ | ವಾಡ |
| ೬೧ | ವಳವಾಡ | ವಳ | ವಾಡ |
| ೬೨ | ಪೊನ್ನವಾಡ | ಪೊನ್ನ | ವಾಡ |
| ೬೩ | ಬಾಗಿವಾಡ | ಬಾಗಿ | ವಾಡ |
| ೬೪ | ಹಾಡಲಿವಾಡ | ಹಾಡಲಿ | ವಾಡ |
| ೬೫ | ಬೊಪ್ಪೇವಾಡ | ಬೊಪ್ಪೆ | ವಾಡ |
| ೬೬ | ಮಂಗಳಿವಾ(ವೇ)ಡ | ಮಂಗಳಿ | ವಾಡ |
| ೬೭ | ಇಳಯಮಠ | ಇಳಯ | ಮಠ |
| ೬೮ | ಪದ್ಮಿಯಮಠ | ಪದ್ಮಿಯ | ಮಠ |
| ೬೯ | ಉಪ್ಪಯಣದಕುಪ್ಪ | ಉಪ್ಪಯಣ | ಕುಪ್ಪ |
| ೭೦ | ಜುಗುಳಕೊಪ್ಪ | ಜುಗುಳ | ಕುಪ್ಪ |

| ೭೧ | ಸಿರಿಗುಪ್ಪೆ | ಸಿರಿ | ಕುಪ್ಪ |
|---|---|---|---|
| ೭೨ | ಎಲೆಯಪೂರ್ವ್ವಳ್ಳಿ | ಎಲೆಯ ಪೂರ್ವ | ಹಳ್ಳಿ |
| ೭೩ | ಚೆಂಚವಳ್ಳಿ | ಚಂಚ | ಹಳ್ಳಿ |
| ೭೪ | ಸವರವಳ್ಳಿ | ಸವರ | ಹಳ್ಳಿ |
| ೭೫ | ಬಾವುಗೆಹಳ್ಳಿ | ಬಾವುಗೆ | ಹಳ್ಳಿ |
| ೭೬ | ಹುಬ್ಬರವಳ್ಳಿ | ಹುಬ್ಬರ | ಹಳ್ಳಿ |
| ೭೭ | ಕುಂಡಿಪಟ್ಟಣ | ಕುಂಡಿ | ಪಟ್ಟಣ |
| ೭೮ | ಕರಡಿಕಲ್ಲು | ಕರಡಿ | ಕಲ್ಲು |
| ೭೯ | ಕೆಸರುಕಲ್ಲು | ಕೆಸರು | ಕಲ್ಲು |
| ೮೦ | ತಡಕಲ್ಲು | ತಡ | ಕಲ್ಲು |
| ೮೧ | ಪೊಟ್ಟಲಕೆರೆ | ಪೊಟ್ಟಲ | ಕೆರೆ |
| ೮೨ | ಮಾಲಂಗೆರೆ | ಮಾಲಂ | ಕೆರೆ |
| ೮೩ | ಹೊಟ್ಟಲಕೆರೆ | ಹೊಟ್ಟಲ | ಕೆರೆ |
| ೮೪ | ಹೊನ್ನಾಯನಹಳ್ಳಿ | ಹೊನ್ನಾಯ | ಹಳ್ಳಿ |
| ೮೫ | ಕೂಂಡಿದೇಶ | ಕೂಂಡಿ | ದೇಶ |
| ೮೬ | ಕವಡೆಳ್ಳಗೊಳ್ಳ | ಕವಡೆಳ್ಳ | ಕೊಳ್ಳ |
| ೮೭ | ವೇಣುಗ್ರಾಮ | ವೇಣು | ಗ್ರಾಮ |

ಹೀಗೆ ಮಹಾರಾಷ್ಟ್ರದಲ್ಲಿ ದೊರೆತ ಕನ್ನಡ ಶಾಸನಗಳಲ್ಲಿನ ಸ್ಥಳನಾಮಗಳಲ್ಲಿ ಊರು, ಪುರ, ಗಾವೆ, ವಾಡ, ಕುಪ್ಪ, ಕೆರೆ ಈ ಮುಂತಾದ ನಿರ್ದಿಷ್ಟಗಳು ವಾರ್ಗಿಕಗಳ ಜೊತೆಗೆ ಬಳಕೆಯಾಗಿದೆ. ಇದರಲ್ಲಿ ಊರು, ಗಾವೆ, ಎಂಬ ಈ ನಿರ್ದಿಷ್ಟಗಳೇ ಹೆಚ್ಚಿನದಾಗಿ ಕಂಡು ಬಂದಿದೆ. ನಿರ್ದಿಷ್ಟಗಳು ಕೇವಲ ಜನವಸತಿಯ ಕುರಿತು ಸೂಚಿಸಿದರೆ, ವಾರ್ಗಿಕವು ಜನವಸತಿಯ ಸ್ಥಳಗಳು ಯಾವ ವಿಷಯ/ವಸ್ತುವನ್ನು ಹೊಂದಿತ್ತು ಎಂಬುದನ್ನು ಸೂಚಿಸುತ್ತದೆ. ಅದೇ ಪ್ರಕಾರವಾಗಿ ಇಲ್ಲಿಯೂ ರೂಪುಗೊಂಡಿರುವಂತದ್ದನ್ನು ಕಾಣಬಹುದು.

ಅಧ್ಯಾಯ – ೦೫

## ಸಮಾರೋಪ

"ಇತಿಹಾಸನ್ನು ಅರಿಯದವ ಇತಿಹಾಸವನ್ನು ಸೃಷ್ಟಿಸಲಾರ" ಎಂಬ ಮಾತು ಯಾವುದೇ ನಾಡಿನ ಸತ್ತ್ವಜೆಯ ಮೇಲೆ ಅವಲಂಬಿತವಾಗಿರುತ್ತದೆ. ಪ್ರತಿಯೊಂದು ಸ್ಥಳನಾಮವು ಆಯಾ ಕಾಲದ, ಸ್ಥಳದ ಭೂತಕಾಲದ ಪಳಯುಳಿಕೆ ಇದ್ದಂತೆ. ಸ್ಥಳನಾಮದ ಅಧ್ಯಯನ ಎಂದರೆ ಮಾನವ ನೆಲೆಗಳ ಪ್ರಾಚ್ಯರೂಪಗಳ ಅಧ್ಯಯನ ಎನಿಸಿದೆ. ಕಾಲಗತಿಯಲ್ಲಿ ತಲೆಮಾರು ಬದಲಾದಂತೆಲ್ಲ ಅವುಗಳಲ್ಲಿಯ ಧ್ವನಿ, ರೂಪ, ಭಾಷಾ ಬಳಕೆಯ ವಿಧಾನ ಆಯಾ ಕಾಲದ ಜನಜೀವನದೊಂದಿಗೆ ಬದಲಾವಣೆಯಾಗುತ್ತಲೇ ಮುಂದುವರಿಯುತ್ತವೆ. ಎಷ್ಟೋ ಸ್ಥಳನಾಮಗಳಲ್ಲಿ ಪ್ರಾಕ್ ಚಾರಿತ್ರಿಕ ಹಾಗೂ ಚಾರಿತ್ರಿಕ ಸಾಕ್ಷಿಗಳು ಪ್ರತಿಬಿಂಬಿತವಾಗಿರುತ್ತವೆ. ಕೆಲವು ಸ್ಥಳನಾಮಗಳಂತೂ ಪ್ರಕೃತಿ ವೈಚಿತ್ರ್ಯ, ನಿರ್ದಿಷ್ಟ ಗುರುತು ಮುಂತಾದವುಗಳನ್ನು ನಿರೂಪಿಸುವ ವಿವರಣಾತ್ಮಕ ಸ್ಥಳನಾಮಗಳಾಗಿವೆ. ಗ್ರಾಮ ನಾಮಗಳ ಇತಿಹಾಸದಲ್ಲಿ 'ನಿಸರ್ಗವಾಚಿ' ಹೆಸರುಗಳೇ ಸಹಜವಾಗಿ ಮೊದಲು ಹುಟ್ಟಿದವೆಂದು ವಿದ್ವಾಂಸರು ಹೇಳುತ್ತಾರೆ.

ಹೀಗೆ ಸ್ಥಳನಾಮಗಳನ್ನು ಹುಡುಕುತ್ತಾ ಹೋದರೆ ಅದೊಂದು ನಿರಂತರ ಯಾತ್ರೆಯಾಗುತ್ತದೆ. ಇದು ಯಾರೋ ಅಲ್ಲಲ್ಲಿ ಮಾಡುವಂತಹ ಕೆಲಸವಲ್ಲ. ಪ್ರತಿಯೊಬ್ಬರೂ ಆಸಕ್ತಿವಹಿಸುವುದರಿಂದ ನಮ್ಮ ಬದುಕಿನ ಮೂಲ ಸೆಲೆ–ನೆಲೆಗಳನ್ನು ತಿಳಿದಂತಾಗುತ್ತದೆ. ಇದರಲ್ಲಿ ಸ್ವಲ್ಪ ಆಸಕ್ತಿ ಬೆಳಸಿಕೊಂಡರೆ ಸಾಕು ಬದುಕಿನ ಉತ್ಸಾಹ ಚಿಮ್ಮುತ್ತದೆ. ಮೈಮನಗಳಿಗೆ ಆನಂದ ತರುತ್ತದೆ. ಅವರವರ ಊರಿನ ಸ್ಥಳನಾಮ ಮತ್ತು ಮಹತ್ವವನ್ನು ದಾಖಲೆಗೊಳಿಸುವುದು ಸಹೃದಯರ ಹಾಗೂ ಸಂಘ ಸಂಸ್ಥೆಗಳ ಕರ್ತವ್ಯವಾಗಬೇಕು. ಇದರಿಂದ ತಮ್ಮವರ ಆದಿ, ಬದುಕು, ವಿಕಾಸ ಮೇಲಾಗಿ ಜೀವನದ ಮೌಲ್ಯಗಳು ತೆರೆದುಕೊಳ್ಳುತ್ತವೆ. ಇದರಿಂದ ಅಂಕಿತನಾಮಗಳ ವಿಶೇಷವೂ ಗೋಚರಿಸುತ್ತದೆ. ಇವತ್ತು ನಾವು ಬದುಕುತ್ತಿರುವ ವೈಜ್ಞಾನಿಕ ಯುಗದಲ್ಲಿ ನಮ್ಮ ಪೂರ್ವಿಕರ ಬವಣೆ, ಭಾವನೆ ಎಲ್ಲವೂ ಕಣ್ಣು ಮುಂದೆ ನಿಂತಂತಾಗುತ್ತದೆ. ಅವರು ತಮ್ಮ ಬದುಕಿನುದ್ದಕ್ಕೂ ಪ್ರಕೃತಿಯನ್ನು ಅಗಾಧವಾಗಿ ಪ್ರೀತಿಸಿ ಅದರ ಸಮತೋಲನೆ ಕಳೆದುಕೊಳ್ಳುತ್ತಿದ್ದೇವೆ. ನಾಗರೀಕತೆಯ ನೆಪದಲ್ಲಿ ಬದುಕಿನ ವೈಭೋಗಕ್ಕೆ ಬೆಟ್ಟ ಗುಡ್ಡ, ಮರ ಗಿಡ, ಪ್ರಾಣಿ ಪಕ್ಷಿ, ಬಳ್ಳಿಗಳ ನಾಶ ಎಡೆಬಿಡದೆ ನಡಿಯುತ್ತಿದೆ. ನದಿಗಳ ಮಾಲಿನ್ಯತೆ, ಅಗೋಚರವಾಗುತ್ತಿರುವ ಕೆರೆ–ಕಟ್ಟೆ, ಚಾವಡಿಗಳು, ಕುಸಿಯುತ್ತಿರುವ ಆಧ್ಯಾತ್ಮಿಕ ಚಿಂತನಾ ಭಾವನೆ–ಇವು ಎಲ್ಲವೂ ಸಹ ಮನುಷ್ಯನ ಅರಿವಿಗೆ ಬಂದಿದ್ದರೂ ಏನೂ ತಿಳಿಯದವನಂತೆ ಅಸಹಾಯ ವರ್ತನೆಯನ್ನು ತೋರಿಸುತ್ತಿದ್ದಾನೆ. ಇದು ಹೀಗೆಯೇ ಮುಂದುವರಿದರೆ ಇಡೀ ವಿಶ್ವ ಒಂದು ದಿನ ಸ್ಥಾನಪಲ್ಲಟನೆಗೊಂಡು ಮುಂದೆ ಎಂದೋ ಒಮ್ಮೆ ಪುನರಾವರ್ತನೆಗೊಂಡು ಮತ್ತೆ ಆದಿ ಮಾನವ ಬದುಕಿನ ಯಥಾಸ್ಥಿತಿಗೆ ಜೀವ ಸೃಷ್ಟಿ ತಳ್ಳಿದರು ತಳ್ಳಬಹುದು.

ಈ ಸಂದರ್ಭದಲ್ಲಿ ರಾಷ್ಟ್ರಪಿತ ಮಹಾತ್ಮ ಗಾಂಧೀಜಿಯವರನ್ನು ನೆನೆಯಲೇಬೇಕು. ಭಾರತವನ್ನು ಕಾಣಬೇಕಾದರೆ ಅದರ ನಗರಗಳಲ್ಲಿ ಅಲ್ಲ. ಲಕ್ಷ ಲಕ್ಷ ಹಳ್ಳಿಗಳಲ್ಲಿ ಮತ್ತು ಅದರಲ್ಲಿ ವಾಸಿಸುತ್ತಿರುವ ಕೋಟ್ಯಾಂತರ ಜನರಲ್ಲಿ. ಅವರು ಸರಳವಾದ ಉತ್ತಮ ರೀತಿಯಲ್ಲಿ ಜೀವನವನ್ನು ನಡೆಸುವಂತೆ ಅವರಲ್ಲಿ ಹೊಸ ಉತ್ಸಾಹ, ಜ್ಞಾನ ಹಾಗೂ ನವಚೇತನವನ್ನು ತುಂಬಬೇಕು. ಪಟ್ಟಣಕ್ಕೆ ವಲಸೆಹೋಗದಂತೆ ಗುಡಿಕೈಗಾರಿಕೆಗಳನ್ನು ಪೋಷಿಸಬೇಕು. ಪ್ರತಿಯೊಂದು ಗ್ರಾಮವೂ ಸಂಪೂರ್ಣ ಅಧಿಕಾರವುಳ್ಳ ಗ್ರಾಮರಾಷ್ಟ್ರ ಅಥವಾ ಗ್ರಾಮಪಂಚಾಯಿತಿಯಾಗಿ ಮಾರ್ಪಾಡಾಗಬೇಕು. ಏಳುವ ವ್ಯಾಜ್ಯಗಳು ಸ್ಥಳದಲ್ಲಿಯೇ ಬಗೆಹರಿಯಬೇಕು. ನನ್ನ ಸ್ವರಾಜ್ಯ ಕೇವಲ ಧನಿಕರ ಮತ್ತು ಪಟ್ಟಣಿಗರ ಸ್ವರಾಜ್ಯವಲ್ಲ; ಅದು ಹಳ್ಳಿಯವರ ಮತ್ತು ಬಡವರ ಸ್ವರಾಜ್ಯ ಹೀಗೆ ಏನೆಲ್ಲಾ ಕನಸು ಕಂಡ ಗಾಂಧೀಜಿಗೆ ಪರ್ಯಾಯವಾಗಿ ನಗರವಾಸಿಗಳಾದ ನಾವು ಭಾರತವನ್ನು ಕಾಣುವುದು ನಗರಗಳಲ್ಲೆಂದು; ಹಳ್ಳಿಗಳು ನಮ್ಮ ಸೌಕರ್ಯಕ್ಕಾಗಿ ಏರ್ಪಟ್ಟಿವೆಯೆಂದು ನಂಬಿದ್ದೇವೆ. ಈ ನಂಬಿಕೆ ಬದಲಾಗಬೇಕಾದ ಸಮಯ ಹತ್ತಿರ ಬಂದಿದೆ. ಸರಳ ಜೀವನ ಪ್ರಕೃತಿಯನ್ನು ಉಳಿಸುತ್ತದೆ. ಹಳ್ಳಿ ಮತ್ತು ಅದರ ಸುತ್ತಲ ಸಂಪತ್ತು ಉಳಿಯಬೇಕಾಗಿದೆ. ಇದು ಭಾರತಕ್ಕಷ್ಟೇ ಅಲ್ಲ ಇಡೀ ವಿಶ್ವಕ್ಕೆ ಅನ್ವಯವಾಗಬೇಕು.

'ಜನನಿ ಜನ್ಮ ಭೂಮಿಶ್ಚ ಸ್ವರ್ಗದಪಿ ಗರೀಯಸಿ' ಅಂದರೆ ಜನನಿ ಮತ್ತು ಜನ್ಮ ಭೂಮಿಗಳೆರಡೂ ಸ್ವರ್ಗಕ್ಕಿಂತ ಮಿಗಿಲು. ನಮ್ಮನ್ನು ಹೆತ್ತವರ, ನಮ್ಮನ್ನು ಹೊತ್ತು ಪೊರೆದ ನೆಲದ ಹಿನ್ನೆಲೆ, ಹುಟ್ಟು, ಹೆಸರಿನ ಐತಿಹ್ಯ ನಮಗೆ ಹರ್ಷ ತರುತ್ತದೆ.

**ಫಲಿತಗಳು:**

೧) ಸ್ಥಳನಾಮಗಳು ಸಂಕೀರ್ಣತೆಯಿಂದ ಸರಳತೆಗೆ ಸಾಗುವ ಭರದಲ್ಲಿ ಅವು ಹ್ರಸ್ವಗೊಂಡು, ಸವಕಳಿಗೊಂಡು, ಇಂದು ಅದರ ಅರ್ಥ ವಿವರಣೆ, ನಿಷ್ಪತ್ತಿ ಒಂದು ಒಗಟಾಗಿದ್ದು, ಅದು ಬಿಡಿಸಲಾಗದ ಕಗ್ಗಂಟಾಗಿರುವುದು ಕಾಣಬರುತ್ತದೆ.

೨) ಕವಿಹಂ ಶಾಸನ ಸಂಪುಟ-೬ರಲ್ಲಿನ ಶಾಸನೋಕ್ತ ಸ್ಥಳನಾಮಗಳನ್ನು ಗುರ್ತಿಸಿ 'ಅ'ಕಾರಾದಿಯಾಗಿ ವಿಶ್ಲೇಷಿಸಿ ಜೊತೆಗೆ ಶಾಸನ ದೊರೆತ ಸ್ಥಳ, ಶಾಸನವು ಪ್ರಕಟಗೊಂಡ ವರ್ಷ, ಇವುಗಳನ್ನೊಳಗೊಂಡ ಪಟ್ಟಿಯು ಮಹಾರಾಷ್ಟ್ರದ ಸ್ಥಳನಾಮಗಳ ಕುರಿತಂತೆ ಸ್ಥೂಲವಾದ ಪರಿಚಯ ಮಾಡಿಕೊಡಲು ಸಹಕಾರಿಯಾಗಿ ಕಂಡು ಬಂದಿದೆ.

೩) ಕವಿರಾಜಮಾರ್ಗದಲ್ಲಿ ಕನ್ನಡನಾಡು ಕಾವೇರಿಯಿಂದ ಗೋದಾವರಿಯವರೆಗೆ ವ್ಯಾಪಿಸಿತ್ತು, ಎಂಬ ಉಲ್ಲೇಖವಿದೆ. ಇದಕ್ಕೆ ಮಹಾರಾಷ್ಟ್ರದ ಕನ್ನಡ ಶಾಸನಗಳು ಪುಷ್ಟಿಕೊಟ್ಟರೆ, ಈ ಶಾಸನಗಳಲ್ಲಿನ ಸ್ಥಳನಾಮಗಳು ಸಾಕ್ಷಿಯಾಗಿ ಕಂಡು ಬರುತ್ತದೆ.

೯) 'ಮಹಾರಾಷ್ಟ್ರದ ಕನ್ನಡ ಶಾಸನೋಕ್ತ ಸ್ಥಳನಾಮಗಳು' ಎಂಬ ಈ ಸಂಪ್ರಬಂಧವು ಹೊಸತಾಗಿದ್ದು, ಇದನ್ನು ಕಟ್ಟಿಕೊಡುವಲ್ಲಿ ಮಾಡಿದ ಅಧ್ಯಯನವು ಹೊಸತೆನಿಸಿದರೂ, ಒಂದು ಒಳ್ಳೆಯ ಅನುಭವ ಆಸಕ್ತಿಯನ್ನು ನನ್ನಲ್ಲಿ ಹುಟ್ಟಿ ಹಾಕಿತು ಎಂಬುದರಲ್ಲಿ ಎರಡು ಮಾತಿಲ್ಲ. ಜೊತೆಗೆ ಮಹಾರಾಷ್ಟ್ರದ ಸ್ಥಳನಾಮಗಳ ಬಗ್ಗೆ ಆಸಕ್ತಿ ಇರುವವರಿಗೆ ಸ್ಫೂರ್ತಿದಾಯಕವೂ ಆಗಿದೆ.

ಒಟ್ಟಾರೆಯಾಗಿ 'ಮಹಾರಾಷ್ಟ್ರದ ಕನ್ನಡ ಶಾಸನೋಕ್ತ ಸ್ಥಳನಾಮಗಳು' ಈ ಕುರಿತು ಮಾಡಿರುವ ಈ ಸಂಪ್ರಬಂಧದಲ್ಲಿ ಮಹಾರಾಷ್ಟ್ರದ ಕನ್ನಡ ಶಾಸನಗಳು ಹಾಗೂ ಅದರಲ್ಲಿ ಉಲ್ಲೇಖಗೊಂಡಿರುವ ಸ್ಥಳನಾಮಗಳ ಪರಿಚಯ ಮಾಡಿಕೊಡಲಾಗಿದೆ. ಅಲ್ಲದೆ ಈ ಸ್ಥಳನಾಮಗಳು ಯಾವ ಅರ್ಥದ ಹಿನ್ನೆಲೆಯಲ್ಲಿ ಬಳಕೆಯಾಗಿದೆ ಎಂಬುದನ್ನು ಇಲ್ಲಿ ಕಟ್ಟಿಕೊಡುವ ಪ್ರಯತ್ನ ಮಾಡಲಾಗಿದೆ. ಸ್ಥಳನಾಮಗಳ ಕುರಿತಾದ ಈ ಪ್ರಕಾರದ ಅಧ್ಯಯನ ಸ್ಥಳನಾಮವು ಒಳಗೊಂಡಿರುವ ಗೌಣಾರ್ಥವನ್ನು ಪ್ರಚುರ ಪಡಿಸಿ ಅದರ ಹಿರಿಮೆಯನ್ನು ಸಾರುತ್ತದೆ. ಈ ದೆಸೆಯಲ್ಲಿ ಆಸಕ್ತರ ಗಮನ 'ಸ್ಥಳನಾಮ'ಗಳತ್ತ ಹರಿದರೆ ಈ ಸಂಪ್ರಬಂಧದ ಶ್ರಮ ಸಾರ್ಥಕ.

# ಮಹಾರಾಷ್ಟ್ರ ನಕ್ಷೆ


MAHARASHTRA
DISTRICT MAP
NANDURBAR
MADHYA PRADESH
GUJARAT
Nandurbar
DHULE
Jalgaon
Dhule
JALGAON
AMRAVATI
Nagpur
Bhandara
Gondia
BHANDARA
AKOLA
NAGPUR
GONDIA
Wardha
Akola
Amravati
Buldhana
WARDHA
CHHATTISGARH
NASHIK
BULDHANA
WASHIM
Yavatmal
CHANDRAPUR
Nashik
AURANGABAD
Washim
YAVATMAL
Gadchiroli
Aurangabad
Jalna
Hingoli
Chandrapur
THANE
AHMADNAGAR
JALNA
HINGOLI
GADCHIROLI
Thane
Parbhani
MUMBAI
SUBURBAN
Nanded
MUMBAI
PUNE
Ahmadnagar
Bid
PARBHANI
BID
NANDED
Alibag
Pune
RAIGARH
OSMANABAD
LATUR
Latur
Osmanabad
Satara
SOLAPUR
RATNAGIRI
Solapur
SATARA
TELANGANA
ARABIAN
SEA
SANGLI
Ratnagiri
Sangli
Kolhapur
KOLHAPUR
KARNATAKA
LEGEND
State Boundary
District Boundary
SINDHUDURG
State Capital
District Headquarter
Oras
Map not to Scale
Copyright © 2014 www.mapsofworld.com
GOA

# ಆಕರ ಗ್ರಂಥಗಳು


೧. ಅಂಗಡಿ ಎಸ್ ಎಸ್, **ಶಂಭಾಜೋಶಿ ಭಾಷಿಕ ವಿವೇಚನೆ**, ೨೦೧೦, ಕನ್ನಡ ವಿಶ್ವ ವಿದ್ಯಾಲಯ ಹಂಪಿ.

೨. ಉಪಾಧ್ಯ-ದೇವರುಕೊಂಡಾರೆಡ್ಡಿ, ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೬, ೨೦೧೧, ಕನ್ನಡ ವಿಶ್ವವಿದ್ಯಾಲಯ ಹಂಪಿ.

೩. ಕಲಬುರ್ಗಿ ಎಂ ಎಂ, **ಶಾಸನ ವ್ಯಾಸಂಗ**, ೧೯೭೪, ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ.

೪. ಕಲಬುರ್ಗಿ ಎಂ ಎಂ, **ಕನ್ನಡ ನಾಮ ವಿಜ್ಞಾನ**, ೧೯೮೯. ಬೆಂಗಳೂರು ವಿಶ್ವ ವಿದ್ಯಾಲಯ ಬೆಂಗಳೂರು.

೫. ಕಲಬುರ್ಗಿ ಎಂ ಎಂ, **ಕನ್ನಡ ಸಂಶೋಧನಾಶಾಸ್ತ್ರ**, ೧೯೯೫, ಚೇತನ ಬುಕ್ ಹೌಸ್ ಬೆಂಗಳೂರು.

೬. ಕೆಮ್ತೂರು ರಘುಪತಿಭಟ್ಟ, **ತುಳುನಾಡಿನ ಸ್ಥಳನಾಮಗಳು**. ೧೯೭೮, ಕನ್ನಡ ಸಾಹಿತ್ಯ ಪರಿಷತ್ತು, ಚಾಮರಾಜಪೇಟೆ ಬೆಂಗಳೂರು.

೭. ಗೋಪಾಲಕೃಷ್ಣ ವಿ, **ಸ್ಥಳನಾಮ ಅಧ್ಯಯನಗಳು**, ೧೯೮೭. ವಿದ್ಯಾಗಿರಿ ಪ್ರಕಾಶನ ದಾರಿನಾಯ್ಕನ ಪಾಳ್ಯ.

೮. ಚಿದಾನಂದಮೂರ್ತಿ ಎಂ, **ವಾಗಾರ್ಥ**. ೧೯೮೧, ಬಾಪ್ಕೋ ಪ್ರಕಾಶನ ಬೆಂಗಳೂರು.

೯. ಜವರೇಗೌಡ ದೇ, **ಸ್ಥಳನಾಮ ವ್ಯಾಸಂಗ**, ೧೯೯೦, ಸಹ್ಯಾದ್ರಿ ಪ್ರಕಾಶನ ಕುವೆಂಪು ವಿದ್ಯಾವರ್ದಕ ಟ್ರಸ್ಟ್ ಕವಿಶೈಲಾ.

೧೦. ದೇಶಪಾಂಡೆ ಎಸ್ ಎಲ್, **ಕರ್ನಾಟಕದ ಸ್ಥಳನಾಮಗಳು ಒಂದು ಅಧ್ಯಯನ**, ೨೦೦೮, ಸರಸ್ವತೀ ಆಫ್‌ಸೆಟ್ ಮುದ್ರಣಾಲಯ ಧಾರವಾಡ೧

೧೦. ನಾಗಾಚಾರಿ ಎಸ್, **ನಾಮಸಂಪದ**, ೨೦೦೬, ಸೋನಾ ಪ್ರಕಾಶನ ಮೈಸೂರು.

೧೧. ನಾರಾಯಣ ಕೆ ವಿ (ಸಂ), **ಸ್ಥಳನಾಮಗಳು ಪರಿವರ್ತನೆ ಮತ್ತು ಪ್ರಭಾವ**, ೧೯೯೯, ಕನ್ನಡ ವಿಶ್ವ ವಿದ್ಯಾಲಯ ಹಂಪಿ.

೧೨. ನೇಗಿನಹಾಳ, **ಪ್ರಾಚೀನ ಕನ್ನಡ ಶಾಸನಗಳ ಭಾಷಿಕ ಅಧ್ಯಯನ**, ೧೯೮೨, ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ.

೧೩.ಭಟ್ಟ ಕೆ.ಆರ್. **ಸ್ಥಳನಾಮ ನಿರ್ದೇಶನ**, ೧೯೭೭, ಭವ್ಯವಾಣಿ ಪಬ್ಲಿಕೇಶನ್.

೧೪. ಮಣಿಪಾಲ ಆರ್. ಕೆ. **ಹೆಸರಿನಲ್ಲೇನಿದೆ**, ೧೯೮೯, ನ್ಯೂಸ್ಪಾಲ್ ಪಬ್ಲಿಕೇಶನ್ ಸಾರಕ್ಕಿ ಬೆಂಗಳೂರು.

೧೫. ವಿಶ್ವನಾಥ, **ಸಕಲೇಶಪುರ ಪರಿಸರದ ಸ್ಥಳನಾಮಗಳು**. ೧೯೯೬, ದೇವಿ ಪ್ರಕಾಶನ ಮೈಸೂರು.

೧೬. ವಿಶ್ವನಾಥ, **ಸ್ಥಳನಾಮಗಳು**, ೧೯೯೬, ಸಂವಹನ ಪ್ರಕಾಶನ ಮೈಸೂರು.

೧೭. ವಿಶ್ವನಾಥ, **ಗ್ರಾಮನಾಮಗಳ ಸಾಂಸ್ಕೃತಿಕ ಪರಿವೇಷ**. ೨೦೦೦, ದೇವಿ ಪ್ರಕಾಶನ ಮೈಸೂರು.

೧೮. ವಿಶ್ವನಾಥಯ್ಯ ಸಿ ಎಂ, **ಕಡೂರು ತಾಲ್ಲೂಕಿನ ಸ್ಥಳನಾಮಗಳು**, ೨೦೦೪, ಕನ್ನಡ ಭಾರತಿ, ಕುವೆಂಪು ವಿಶ್ವ ವಿದ್ಯಾಲಯ ಶಂಕರಘಟ್ಟ.

೧೯. ಶಂಬಾಜೋಶಿ, **ಎಡೆಗಳು ಹೇಳುವ ಕಂನಾಡ ಕತೆ**. ೧೯೪೭, ಮಾಧವ ಬಲ್ಲಾಳ ಬಂದುಗಳು ಸಾಧನಕೇರಿ, ಧಾರವಾಡ.

೨೦. ಸುಭಾಷ್ ಆರ್. **ಸಿಂಧಗಿ ತಾಲ್ಲೂಕಿನ ಜೈನ ವಾಸ್ತು ಶಿಲ್ಪ ಸಮೀಕ್ಷೆ vol೧೬**, ೨೦೧೨.

೨೧. ಸೇಡಿಯಾಪು ಕೃಷ್ಣಭಟ್ಟ, **ಕೆಲವು ದೇಶನಾಮಗಳು**. ೧೯೭೫, ಸಾಹಿತ್ಯ ಸಂಘ ಮಣಿಪಾಲ.

**ಕನ್ನಡ ವಿಷಯ ವಿಶ್ವಕೋಶ**

ಸಂಪುಟ-೧, (೨೦೦೫)

ಸಂಪುಟ-೨, (೨೦೦೭)

ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ

ಮೈಸೂರು ವಿಶ್ವವಿದ್ಯಾಲಯ

**ಕನ್ನಡ ನಿಘಂಟುಗಳು(೧೯೯೫)**

ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು.

